

ವಿಗ್ರಹವನು ನಿಲ್ಲಿಸೊ ವೆಂಕಟ; ಗಗ
ನಾಗ್ರಕೆ ಬೆಳೆದು ಗಂಗೆಯ ಪಡೆದ ನಿನ್ನ ||ಪ||

ರನ್ನದ ಮಕುಟ ಸುವರ್ಣಕುಂಡಲ ತೇಜ
ಚೆನ್ನ ಗಂಡ ಸ್ಥಳದಿ ತೂಗಿ ಪೊಳೆವ ನಿನ್ನ ||೧||

ಕೊರಳ ತ್ರಿರೇಖೆಯು ಉರುಕೌಸ್ತುಭ ಹಾರ
ಉರದಲ್ಲಿ ಶ್ರೀವತ್ಸ ಧರಿಸಿ ಮೆರೆವ ನಿನ್ನ ||೨||

ಕುಕ್ಷಿಯೊಳಗೆ ಲಕ್ಷ ಲೋಕವನಡಗಿಸಿ
ಅಕ್ಷಿಯಿಂ ಸುಜನರ ರಕ್ಷಿಸುವ ನಿನ್ನ ||೩||

ನಖದೊಳನಂತ ಬ್ರಹ್ಮಾಂಡವನಡಗಿಸಿ
ಮಕ್ಕಳಾಟಿಕೆಯಂತೆ ಮರುಳು ಮಾಡುವ ನಿನ್ನ ||೪||

ಉತ್ಪತ್ತಿ ಸ್ಥಿತಿ ಲಯಕಾರಣ ಕರ್ತ ಜ
ಗತ್ಪತಿ ವಿಜಯವಿಠಲ ವೆಂಕಟ ||೫||

---ಶ್ರೀ ವಿಜಯದಾಸರು.

# ವಾಚಕರಲ್ಲಿ ಮುಖ್ಯ ಗಮನಿಕೆ

ಸಪ್ತಗಿರಿಯನ್ನು ಓದುತ್ತಿರುವ ತಾವು ಈ ಹತ್ತು ವರ್ಷಗಳಲ್ಲಿ ಸುತ್ತ ಮುತ್ತಲ ಎಲ್ಲ ವಸ್ತುಗಳ ಬೆಲೆಗಳು ಏರುತ್ತಲೇ ಇದ್ದರೂ ಸಪ್ತಗಿರಿಯ ಬೆಲೆ ಒಂದು ರೂಪಾಯಿನಿಂದ ಏರಿಲ್ಲವೆಂಬುದನ್ನು ಗಮನಿಸಿಯೇ ಇರುತ್ತೀರಿ. ಎಲ್ಲ ಕಚ್ಚಾವಸ್ತುಗಳ ಬೆಲೆಗಳೂ ಏರಿರುವುದರಿಂದಾಗಿ ನಮ್ಮ ನಿಮ್ಮ ಸಪ್ತಗಿರಿಯ ಬೆಲೆಯನ್ನೂ ಏರಿಸುವುದು ಅನಿವಾರ್ಯವಾಗಿರುವ ಈ ಹೊತ್ತಿನಲ್ಲಿ ತಿ.ತಿ. ದೇವಸ್ಥಾನಗಳ ಆಡಳಿತದ ವಿಶೇಷ ಪ್ರಾಧಿಕಾರ ಈ ಬೆಲೆಯನ್ನು ಒಂದು ರೂಪಾಯಿನಿಂದ ಎರಡು ರೂಪಾಯಿಗಳಿಗೆ ಏರಿಸಲು ತೀರ್ಮಾನಿಸಿದ್ದು ಈ ಬೆಲೆ ಜೂನ್ 1993 ರಿಂದ ಜಾರಿಗೆ ಬರಲಿದೆ. ಎಂದರೆ ಜೂನ್ 1993 ರಿಂದ

**ಬಿಡಿಪ್ರತಿ ರೂ. 2/-- ಮಾತ್ರ**

**ವಾರ್ಷಿಕ ಚಂದಾ ರೂ. 24/-- ಆಗಿರುತ್ತದೆ.**

ಈಗಾಗಲೇ ಚಂದಾದಾರರಾಗಿರುವವರ ಹಣವನ್ನು ಹೊಸದರಗಳಂತೆ ಹೊಂದಿಸಲಾಗುವುದು. ಹಾಗಾಗಿ ಅವರುಗಳು ವಾರ್ಷಿಕ ಚಂದಾ ಹಣದ ಕೊರತೆಯನ್ನು ತುಂಬ ಬೇಕಾಗಿ ಬರುವುದು.

ಏಜಂಟರಲ್ಲಿ -- ತಮ್ಮಗಳ ಠೇವಣಿ ಹಣವನ್ನು ಹೆಚ್ಚಿಸಬೇಕಾಗಿದೆ. ತಮ್ಮ ಅಗತ್ಯವನ್ನು ಕುರಿತು ಕೂಡಲೇ ಬರೆಯಬೇಕಾದ ಅಗತ್ಯವೂ ಉಂಟು.

ಏಜಂಟರಿಲ್ಲದ ಕಡೆಗಳಲ್ಲಿ ಏಜಂಟರು ಬೇಕಾಗಿದ್ದಾರೆ.

ಓದುಗರು -- ಏಜಂಟರು ಸಹಕಾರವನ್ನು ನೀಡುವರೆಂದು ನಂಬಲಾಗಿದೆ.

ಸಂಪಾದಕ
**ಸಪ್ತಗಿರಿ ತಿ.ತಿ.ದೇ.,**
ತಿರುಪತಿ.

---

**ಸಂದರ್ಶಿಸಿ.** **ಆನಂದಿಸಿ.**

# ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ ತಿರುಮಲೆ.

## ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತೀ ಪರಿಣಯೋತ್ಸವ

| | | |
|---|---|---|
| 30--4--93ಶುಕ್ರವಾರ | ಗಜವಾಹನ. | ವೈಶಾಖ ಶುದ್ಧ ನವಮಿ |
| 1--5--93ಶನಿವಾರ | ಅಶ್ವವಾಹನ. | ವೈಶಾಖ ಶುದ್ಧ ದಶಮಿ |
| 2--5--93ಭಾನುವಾರ | ಗರುಡವಾಹನ. | ವೈಶಾಖ ಶುದ್ಧ ಏಕಾದಶಿ |

ಮೂರು ದಿನಗಳ ಈ ಉತ್ಸವದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳೂ ಉತ್ಸಾಹಕರವಾಗಿರುತ್ತವೆ. ವಿವರಗಳಿಗಾಗಿ ತಮ್ಮ ಬಳಿಯ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ಕೇಳಿರಿ.

**ನೀವೂ ಬನ್ನಿ.** **ತಿ. ತಿ. ದೇ.** **ನಿಮ್ಮವರನ್ನೂ ಕರೆತನ್ನಿ.**



ಸಂಪುಟ ೨೩] ಮೇ ೧೯೯೩ [ಸಂಚಿಕೆ ೧೨

# ವಿಷಯಸೂಚಿ



ಮುಖಚಿತ್ರ :- ಹನುಮಂತ -- ಚಿತ್ರ--ಕೆ. ಜಗದೀಶ್.
ಹಿಂಬದಿಯಲ್ಲಿ : ಶ್ರೀನಿವಾಸ ಮಂಗಾಪುರ ದೇವಾಲಯ.
ಒಳಗಡೆ : 1. ತಾಳ್ಲಪಾಕ ಅನ್ನಮಾಚಾರ್ಯ.
2.ತಿರುಮಲೆಯಲ್ಲಿ ಶ್ರೀ ಪದ್ಮಾವತೀಪರಿಣಯ.


ಗೌರವ ಸಂಪಾದಕರು :
**ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಐ.ಎ.ಎಸ್.,**
ಕಾರ್ಯನಿರ್ವಹಣಾಧಿಕಾರಿ
ತಿ.ತಿ.ದೇ., ತಿರುಪತಿ.

ಸಂಪಾದಕ :
ಕೆ. ಸುಬ್ಬಾರಾವ್ರ ಎಂ.ಎ.

ಉಪಸಂಪಾದಕ :
ಬಿ.ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.




**ಪ್ರಿಯ ವಾಚಕಬಂಧು;**

ಸಪ್ತಗಿರಿಯ ಓದುಗರು ತಮ್ಮ ಸುತ್ತಣ ಎಲ್ಲ ದೈನಿಕ, ವಾರ ಪಕ್ಷ ಮಾಸಪತ್ರಿಕೆಗಳ ಬೆಲೆಗಳೂ ಈ ಹಿಂದಿನ ವರ್ಷಗಳಲ್ಲಿ ಏರುತ್ತಲೇ ಹೋಗುತ್ತಿರುವುದನ್ನು ಗಮನಿಸಿರಬಹುದು. ಪತ್ರಿಕೆಗಳ ಬೆಲೆಗಳೇ ಏನು, ಎಲ್ಲ ವಸ್ತುಗಳ ಬೆಲೆಯೂ ಏರಿವೆ. ಅಂತಹ ಪರಿಸ್ಥಿತಿಯಲ್ಲಿಯೂ ಸಪ್ತಗಿರಿಯ ಬೆಲೆ ಒಂದು ರೂಪಾಯಿ ಮಾತ್ರವೇ ಆಗಿ ಓದುಗರನ್ನು ತಲುಪುತ್ತಿದೆಯೆಂದರೆ ಅದಕ್ಕೆ ಮುಖ್ಯವಾದ ಕಾರಣ ಶ್ರೀ ವೇಂಕಟೇಶ್ವರ ಸ್ವಾಮಿಯ ಕೃಪಾಛತ್ರದಲ್ಲಿ ಸಪ್ತಗಿರಿ ಬೆಳೆಯುತ್ತಿರುವುದೇ ಆಗಿದೆ.

ರೂಪಾಯಿಯ ಬೆಲೆಯೇ ಇಳಿಮುಖ ಪಯಣ ಹೊಂದಿದ ಈ ಹಿಂದಿನ ಹತ್ತುವರ್ಷಗಳಲ್ಲೂ ಸಪ್ತಗಿರಿಯ ಬೆಲೆಯನ್ನು ಹೆಚ್ಚಿಸುವ ಯೋಚನೆ ಬಂದಿರಲಿಲ್ಲ. ಈಗ ಒಂದು ವರ್ಷದಿಂದ ಸಪ್ತಗಿರಿಯ ಮುದ್ರಣ ವಿನ್ಯಾಸ ಹೊಸ ಹೊಸದಾಗಿ ಹೆಚ್ಚು ಆಕರ್ಷಕವಾಗುವಂತೆ, ಓದು ಸುಖಮಯವಾಗುವಂತೆ ಹೊಸ ಹೊಸ ಮುದ್ರಣ ಯಂತ್ರಗಳನ್ನು ಬಳಸಲಾಗುತ್ತದೆ. ಇದರಿಂದಾಗಿ ವೆಚ್ಚಗಳು ಮತ್ತೂ ಹೆಚ್ಚಾಗಿವೆ ಎಂಬುದನ್ನು ಮರೆಯುವಂತಿಲ್ಲ.

ಈ ಹಿನ್ನೆಲೆಯಲ್ಲಿ ಸಪ್ತಗಿರಿಯ ಮುಖಬೆಲೆಯನ್ನು ಒಂದು ರೂಪಾಯಿನಿಂದ ಎರಡು ರೂಪಾಯಿಗಳಿಗೆ ಏರಿಸಲು ತೀರ್ಮಾನಿಸಲಾಗಿದೆ. ತಿ.ತಿ. ದೇವಸ್ಥಾನಗಳ ವಾರ್ತಾಪತ್ರವಾಗಿ ಆರಂಭವಾದ ಈ ಪತ್ರಿಕೆ ಹಿಂದೂ ಸಂಸ್ಕೃತಿಯ, ಧರ್ಮದ, ಮೌಲ್ಯದ ಪ್ರಸಾರ ಪತ್ರಿಕೆ ಸಪ್ತಗಿರಿ ಎಂಬ ಹೆಸರು ಪಡೆದ ಮೇಲೆ ಬೆಲೆಯ ಹೆಚ್ಚಳ ಈಗ ನಾಲ್ಕನೆಯ ಬಾರಿ, ಸಪ್ತಗಿರಿಯ 23 ವರ್ಷಗಳ ದೀರ್ಘಕಾಲದಲ್ಲಿ ಈಗ ನಾಲ್ಕನೆಯ ಬಾರಿಗೆ ಬೆಲೆಯ ಹೆಚ್ಚಳವೆಂದರೆ ಅಸಮಾಧಾನಕ್ಕೆ ಅವಕಾಶವಾಗದು ಎಂದೇ ಭಾವಿಸಲಾಗಿದೆ.

ಕಳೆದ 23 ವರ್ಷಗಳಿಂದ ಓದುಗರ ಆದರಾಭಿಮಾನಗಳನ್ನು ಗಳಿಸಿರುವ ಸಪ್ತಗಿರಿ 24 ನೇ ವರ್ಷದಲ್ಲಿ ಕಾಲಿಡುವ ಈ ಹೊತ್ತಿನಲ್ಲಿ (ಇದು 23 ನೇ ವರ್ಷದ 12 ನೇ ಸಂಚಿಕೆ) ಹೊಸ ಬೆಲೆಯನ್ನು ಕೊಟ್ಟು ಓದುಗರು ಏಜಂಟರು ಎಂದಿನಂತೆಯೇ ಆದರಿಸುವರೆಂದು ನಂಬಲಾಗಿದೆ. (ಪತ್ರಿಕೆಯನ್ನು ಸ್ವಾವಲಂಬಿ ಗೊಳಿಸುವ ಮಾತು ಬಹುದೂರದ್ದು. ಸಪ್ತಗಿರಿಯ ಉತ್ಪಾದನಾ ವೆಚ್ಚ ಪ್ರತಿಯೊಂದಕ್ಕೆ ಐದು ರೂ.ಗಳು) ಉತ್ಪಾದನಾ ವೆಚ್ಚವನ್ನು ಸರಿದೂಗಿಸಲು ವಿವಾದಕ್ಕೆಡೆಯಿಲ್ಲದಂತೆ ಜಾಹೀರಾತುಗಳನ್ನು ಸ್ವೀಕರಿಸಬೇಕೆಂದೂ ತೀರ್ಮಾನವಾಗಿದೆ.

ಸಪ್ತಗಿರಿಯಲ್ಲಿ ಓದುಗರ ಅಭಿಪ್ರಾಯಗಳಿಗೂ ಅವಕಾಶವಿದೆ. ರಚನಾತ್ಮಕ, ಅವಿವಾದಾತ್ಮಕ, ಸೃಜನಾತ್ಮಕ ಸಲಹೆಗಳನ್ನು ಸ್ವೀಕರಿಸಲು ಎಂದಿನಂತೆಯೇ ಸಪ್ತಗಿರಿ ಸಿದ್ಧವಿದೆ. ತಮ್ಮ ಅಮೂಲ್ಯ ಸಲಹೆ ಸೂಚನೆಗಳು ಪ್ರತಿಕ್ರಿಯಾರೂಪವಾಗಿ, ಪ್ರಕ್ರಿಯಾರೂಪವಾಗಿ ಬರಲಿ.

ಸಪ್ತಗಿರಿ ಮನೆ ಮನೆಯಲ್ಲೂ ಪ್ರತಿ ಓದುಗರಲ್ಲೂ ಪ್ರೀತಿಪೂರ್ವಕವಾಗಿ ಸ್ಥಾನಗಳಿಸುವಂತಾಗಲಿ. ಅದಕ್ಕಾಗಿ ಶ್ರೀ ವೇಂಕಟೇಶ್ವರಸ್ವಾಮಿಯ ಆಶೀರ್ವಾದ, ಓದುಗರ ಆದರ ದೊರೆಯುವಂತಾಗಲಿ ಎಂದು ಹಾರೈಸುತ್ತೇನೆ.

ಸಂಪಾದಕ,
**ಸಪ್ತಗಿರಿ.**

* * * * *

# ಪ್ರಥಮ ಮಂಗಲನಾಮ

---ಸಂತಹರಿಹರಾನಂದ ಸರಸ್ವತೀ.

ಅಯೋಧ್ಯಾಧಿಪತಿಯಾದ ದಶರಥನಿಗೆ ಮೂವ ಮಡದಿಯರಿದ್ದರೂ ಸಂತಾನವಿಲ್ಲದೆ ಕೊರಗು ತ್ತ. ಅವನಿಗೆ ಜೀವನದಲ್ಲಿ ಅದೊಂದುಳಿದು ರೆಯಾವ ಕೊರತೆಯೂ ಇರಲಿಲ್ಲ. ಉಣು ಸುವುದರಿಂದ ಮೊದಲ್ಗೊಂಡು ಎಲ್ಲ ಬಗೆಯ ಪತ್ಸಮೃದ್ಧಿಯೂ ಇದ್ದುದರಿಂದ ಆತನ ಸ್ಥಾನ-- ಾನ-- ಪ್ರತಿಷ್ಠೆಯಾದಿಯಾಗಿ ಯಾವುದಕ್ಕೆ ತಾನೆ ರತೆಯಿತ್ತು. ಆದರೆ ಮಕ್ಕಳಿಲ್ಲವೆಂಬ ಕೊರತೆ ಾತ್ರ ಅವನ ಮನಃಶಾಂತಿಯನ್ನು ಕೆಡಿಸಿತ್ತು. ಆ ರತೆ ತುಂಬುವುದಕ್ಕೆ ತನ್ನ ಪ್ರಸಿದ್ಧ ಸೂರ್ಯವಂ ನ ಹೆಸರು ಹೇಳುವುದಕ್ಕೆ ಒಂದು ವಂಶದ ಕುಡಿ ಾದರೂ ಬೇಕೆಂದು ಬಯಸಿ ಚಕ್ರವರ್ತಿ ದಶರ ನು ತನ್ನ ಕುಲಗುರುವಾದ ಬ್ರಹ್ಮರ್ಷಿ ವಸಿಷ್ಠರ ಹೆಯನ್ನು ಕೇಳುತ್ತಾನೆ.

ಬ್ರಹ್ಮಋಷಿ, ಕುಲಗುರು--ವಸಿಷ್ಠರೂ--ವಿಭಾಂ ಕಪುತ್ರರಾದ ಋಷ್ಯಶೃಂಗರ ನೇತೃತ್ವದಲ್ಲಿ ಅತ್ಯಂತ ಹಿಮಾನ್ವಿತವಾದ ಸಂತಾನ ಭಾಗ್ಯ ಪ್ರಾಪ್ತಿಗೆ ೇತುವಾದ 'ಪುತ್ರಕಾಮೇಷ್ಟಿಯನ್ನು' ಮಾಡುವಂತೆ ಹೆ ಮತ್ತು ಮಾರ್ಗದರ್ಶನ ನೀಡಿದ ತರುವಾಯ ತ್ಮವಿಶ್ವಾಸದಿಂದ ಶ್ರದ್ಧೆ ಮತ್ತು ಭಕ್ತಿ ಯುಕ್ತನಾಗಿ ತ್ರಕಾಮೇಷ್ಟಿಯನ್ನು ವಿಧಿವತ್ತಾಗಿ ಲೋಪವಿಲ್ಲ ಂತೆ ದಶರಥನು ಸಪತ್ನೀಕನಾಗಿ ನೆರವೇರಿಸಿದ. ಷ್ಟಿಯ ಅಂತ್ಯದಲ್ಲಿ ಬ್ರಹ್ಮಸಂಬಂಧಿಯಾದ ದೇವ ಪುರುಷ ಯಜ್ಞೇಶ್ವರನು ದೇದೀಪ್ಯಮಾನ ತೇಜ ಿಂದ ಕಂಗೊಳಿಸುತ್ತ ದೇವತೆಗಳ ಆದೇಶದಂತೆ ಜ್ಞಕುಂಡ ಮಧ್ಯದಿಂದ ಪ್ರತ್ಯಕ್ಷನಾಗಿ ದೇವನಿ ಿತವಾದ ದಿವ್ಯಪಾಯಸವನ್ನುಳ್ಳ ಸುವರ್ಣ ಕಲ ವೊಂದನ್ನು ದಶರಥನ ಕೈಗಿತ್ತು ಅದೃಶ್ಯನಾದ.

ತರುವಾಯ ಆ ಪವಿತ್ರಪಾಯಸವನ್ನು ತನ್ನ ಮೂವರೂ ಮಡದಿಯರಿಗೂ ಹಂಚಿದ. ಅವರು ಮೂರೂಮಂದಿಯೂ ಆ ಪರಮಾನ್ನವನ್ನು ಭಕ್ತಿ ಯಿಂದ ಪರಿಶುದ್ಧ ಭಾವದಿಂದ ಪ್ರಾಶನ ಮಾಡಿ ರು. ನವಮಾಸದ ತರುವಾಯ ಮೂವರು ತ್ನಿಯರಾದ ಕೌಸಲ್ಯೆ, ಸುಮಿತ್ರೆ ಮತ್ತು ಮುದ್ದಿನ ಡದಿಯಾದ ಕೈಕೇಯಿಯಿಂದ ನಾಲ್ಕು ಮಕ್ಕಳನ್ನು ಡೆದು ಧನ್ಯತಾನೆಂದು ಆನಂದದಲ್ಲಿ ಮುಳುಗಿದ ಶರಥ. ದೇವನಿರ್ಮಿತವಾದ ಪಾಯಸದ ಪ್ರಭಾವದಿಂದ ಕೌಸಲ್ಯಾ ದೇವಿಯ ಬಸಿರಲ್ಲಿ ಬಂದ ದಶ ರಥಪುತ್ರನಿಗೆ ನಾಮಕರಣದ ಸಮಯದಲ್ಲಿ ಯಾವ ಹೆಸರು ಇಡಬೇಕೆಂಬ ಕುರಿತು ಅವನ ಪರಿಜನ ಪುರಜನರಲ್ಲಿ ನೆರೆದ ಬಂಧುಬಾಂಧವರಲ್ಲಿ ಜಿಜ್ಞಾಸೆ ಬೆಳೆದು ಗುಸು -- ಗುಸು ಪ್ರಾರಂಭವಾಗಿರುವಾಗ -- ತ್ರಿಕಾಲಜ್ಞಾನ ಸಂಪನ್ನರಾದ ವಸಿಷ್ಠರು ಕೌಸಲ್ಯಾ ದೇವಿಯ ಗರ್ಭಸಂಜಾತ (ಶಿಸುವಿಗೆ)ನಿಗೆ 'ರಾಮ' --ಎಂದು ಕರೆದು ಹೆಸರಿಟ್ಟರು. ಈ ಸನ್ನಿವೇಶವನ್ನು ಮಹಾಕವಿಕಾಳಿದಾಸನು -- ತನ್ನ "ರಘುವಂಶ" --ಕಾವ್ಯದಲ್ಲಿ ಅತ್ಯಂತ ಮನೋಜ್ಞವಾಗಿ ಬಹುಸುಂ ದರವಾಗಿ ಬರೆಯುತ್ತಾನೆ.

ರಾಮ ಇತ್ಯಭಿರಾಮೇಣ
ವಪುಷಾ ತಸ್ಯಚೋದಿತಾ
ನಾಮಧೇಯಂ ಗುರುಃ ಚ ಕ್ರೇ
ಜಗತ್ಪ್ರಥಮ ಮಂಗಳಂ

ಎಂದು ಕೌಸಲ್ಯಾದೇವಿಯ ಸುಕುಮಾರನನ್ನು ಎವೆಯಿಕ್ಕದೆ ದಿಟ್ಟಿಸುತ್ತ ನಿಂತ ವಸಿಷ್ಠರು ಸೂರ್ಯ ಕಿರಣದ ಕಾಂತಿಯಂತೆ ಹೊಳೆವ ಮಗುವಿನ ದೇಹ ಕಾಂತಿಯಿಂದ ಪ್ರಚೋದಿತರಾಗಿ ಅತಿ ಆನಂದ ದಿಂದ ಸ್ವಾನುಭವ ಸಂಪತ್ತಿಯಿಂದ "ರಾಮ--ರಾಮ ಅಭಿರಾಮ" ಎಂದು ಉದ್ಗರಿಸಿದರು. ನೆರೆದ ಮಂದಿ ಕರತಾಡನಮಾಡುತ್ತಾ ತಮ್ಮ ಸಂತಸವನ್ನು ವ್ಯಕ್ತಪ ಡಿಸಿ ಆಶೀರ್ಮಂತ್ರಾಕ್ಷತೆಯನ್ನು ಹಾಕಿ ಹಸುಗೂ ಸನ್ನು ಹರಸಿದರು.



'ರಾಮ' ಎಂದರೆ ಆನಂದ ಎಂದು ಅರ್ಥ -- ಗುರುವು ನಾಮಕರಣಮಾಡಿದರು ಎಂದು (ನಾಮ ಧೇಯಂ ಗುರುಶ್ಚ, ಕ್ರೇ) ಕಾಳಿದಾಸನು ಅರ್ಥಮಾ ಡುತ್ತಾನೆ. 'ಗುರು' --ಎಂದರೆ -- 'ದಶರಥ' ಎಂದು ಮಲ್ಲಿನಾಥರ ವ್ಯಾಖ್ಯಾನದಲ್ಲಿ ಬರೆದಿದೆ.

ಶ್ರೀಮದ್ವಾಲ್ಮೀಕಿ ರಾಮಾಯಣದ ನೇರ ವಾಖ್ಯಾ ತೃಗಳಾದ ಶ್ರೀ ಗೋವಿಂದರು ತಮ್ಮ ಟೀಕೆಯಲ್ಲಿ -- 'ಗುರು'ಶಬ್ದಕ್ಕೆ 'ವಸಿಷ್ಠ'ರೆಂದೇ ಅರ್ಥಮಾಡಿ ವಿವ ರಿಸುತ್ತಾರೆ. ಕ್ಷತ್ರಿಯನಾದವನಿಗೆ ಸ್ವತಃ ತಾನೇ ತನ್ನ ಮಗನಿಗೆ (ಮಕ್ಕಳಿಗೆ) ನಾಮಕರಣಮಾಡುವ ಅಧಿ ಕಾರವಿಲ್ಲವಾದ್ದರಿಂದ 'ಗುರು'ವೆಂದರೆ 'ವಸಿಷ್ಠರೇ' ನಾಮಕರಣ ಮಾಡಿದರು, ಎಂದು ಬರೆದಿದ್ದಾರೆ. ಕವಿ ಕಾಳಿದಾಸನು --'ರಾಮ' ಶಬ್ದವನ್ನು ಕುರಿತು, ತನ್ನ ಕಾವ್ಯದಲ್ಲಿ--

"ಜಗತ್ಪ್ರಥಮ ಮಂಗಲನಾಮ" ಎಂದಿದ್ದಾನೆ. ಧಾರಾನಗರದ ಅರಸು ಭೋಜರಾಜನು ಅಕ್ಷರಕ್ಕೆ ಲಕ್ಷಕೊಡುತ್ತಿದ್ದನೆಂಬುದು ಸತ್ಯವಾದಲ್ಲಿ ಕಾಳಿದಾ ಸನ ಈ ಮಹಾವಾಕ್ಯಕ್ಕೆ ಮೊದಲು ಅವನ ಪ್ರಶಸ್ತಿ ಕಾಣಿಕೆ ಸಲ್ಲಬೇಕು. ಜಗತ್ತಿನಲ್ಲಿಯೇ ಪ್ರಥಮವಾದ ("ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಳಂ") ಅನ್ವರ್ಥಕವಾದ ನಾಮ, ಮಂಗಳ ನಾಮ ಶ್ರೀ "ರಾಮನಾಮ".

'ರಾಮ' ಶಬ್ದವು 'ರಮ ಕ್ರೀಡಾಯಾಂ' ಎನ್ನುವ ಧಾತುವಿನಿಂದ ಹುಟ್ಟಿದೆ. 'ರಮಂತೇ' ಯೋಗಿನಃ ಅಸ್ಮಿನ್ನಿತಿ ರಾಮಃ" ಯೋಗಿಗಳು ಈತನಲ್ಲಿ ರಮಿ ಸುತ್ತಾರೆ. ಆನಂದಿಸುತ್ತಾರೆ ಯಾದ್ದರಿಂದ 'ರಾಮ' ಎಂಬ ವ್ಯುತ್ಪತ್ತಿ ಇದೆ.

"ರಮಯತಿ ಲೋಕಾನಿತಿ ರಾಮಃ" ಲೋಕದ ಜನರನ್ನು ಆನಂದಪಡಿಸುತ್ತಾನೆ ಯಾದ್ದರಿಂದ 'ರಾಮ' ಎಂದು ಅರ್ಥಮಾಡುತ್ತಾರೆ. ರಾಮೋ ರಮಯತಾಂ ವರಃ" -- ರಾಮಸ್ಯ ಲೋಕರಾ ಮಸ್ಯ--ಇತ್ಯಾದಿ ಋಷಿ ವಚನಗಳಿಂದ ಶ್ರೀರಾಮನು ಲೋಕಾಭಿರಾಮನೆಂದು ತಿಳಿಯುತ್ತದೆ.

'ಶ್ರೀರಾಮ' ಎನ್ನುವಲ್ಲಿ ಶ್ರೀಶಬ್ದಕ್ಕೆ -- ಲಕ್ಷ್ಮೀ, ಸಂಪತ್ತು, ಶೋಭೆ, ಕೀರ್ತಿ, ವೈಭವ -- ಎಂಬ ಅರ್ಥ

**ಗಳಿವೆ.** ಶ್ರೀಕೃಷ್ಣ, ಶ್ರೀ ಶಂಕರ -- ಮುಂತಾದೆಡೆಗಳಲ್ಲಿ ಶ್ರೀ ಸಹಿತನಾದ ಕೃಷ್ಣ, ಶ್ರೀಸಹಿತನಾದ ಶಂಕರ ಎಂದು ಅರ್ಥ ಬರುತ್ತದೆ. ಆದರೆ 'ಶ್ರೀರಾಮ' ಎಂಬ ಶಬ್ದದಲ್ಲಿ -- ಮತ್ತೊಂದು ವಿಶೇಷಾರ್ಥವುಂಟು. ರಾಘವತ್ವೇ ಭವೇತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ" ಇತ್ಯಾದಿ ಪ್ರಮಾಣಾನುಸಾರವಾಗಿ ಸೀತಾದೇವಿಯೂ ಸಾಕ್ಷಾತ್ ಲಕ್ಷ್ಮೀದೇವಿಯೇ ಆಗಿದ್ದಾಳೆ ಶ್ರೀರಾಮನು ವಿಷ್ಣುವಿನ ಅವತಾರವೆಂಬುದು ಸರ್ವವಿದಿತ. ಆದ್ದರಿಂದ "ಶ್ರಿಯಃ ರಾಮಃ ಶ್ರೀರಾಮಃ" ಲಕ್ಷ್ಮಿಯ ಆನಂದಕ್ಕೆ ನೆಲೆಯಾದವನು ಎಂದರ್ಥ. "ಶ್ರಿಯಂ ರಮಯತೀತಿ ಶ್ರೀರಾಮಃ" ಲಕ್ಷ್ಮಿಯನ್ನು ಆನಂದಪಡಿಸುವವನು ಎಂದೂ ಶ್ರೀರಾಮನೆಂದೂ ದಾಶರಥಿಗೆ ಅನ್ವರ್ಥವಾಗಿದೆ.

'ರಾಮಾಯಣ'ವೆಂಬ ಶಬ್ದದ ಅರ್ಥವು ಹೀಗಿದೆ. "ರಾಮಸ್ಯ -- ಅಯನಂ" ರಾಮನ ಚರಿತ -- ಸಂಚಾರ ಎಂದರ್ಥವಾಗುತ್ತದೆ. ರಾಮನ ಅಯನ ಯಾವ ಗ್ರಂಥದಲ್ಲಿ ಇದೆಯೋ ಅದು 'ರಾಮಾಯಣ' -- ಅಥವಾ ಶ್ರೀರಾಮನ ಅಯನವನ್ನು ಅಧಿಕರಿಸಿ ಬರೆದ ಗ್ರಂಥ ರಾಮಾಯಣ. ರಾಮಾಯಣ ಶಬ್ದಕ್ಕೆ "ರಾಮಚರಿತೆ" ಎಂದರ್ಥವಾಗುತ್ತದೆ. ರಾಮಃ ಅಯ್ಯತೇ ಅನೇನ ಇತಿ ರಾಮಾಯಣಂ ಈ ಗ್ರಂಥದಿಂದ ಶ್ರೀರಾಮನು ಪ್ರತಿಪಾದಿತನಾಗಿದ್ದಾನೆ. ಈ ಗ್ರಂಥದಿಂದ ಶ್ರೀರಾಮನ ಪ್ರಾಪ್ತಿಯಾಗುತ್ತದೆ. ಆದ್ದರಿಂದ ರಾಮಾಯಣವೆಂದೂ ವ್ಯುತ್ಪತ್ತಿಯಿದೆ. "ಯಃ ಪಠೇದ್ರಾಮಚರಿತಂ ಸರ್ವಪಾಪೈಃ ಪ್ರಮುಚ್ಯತೇ"--

'ರಘುವರ ಚರಿತಂ ಮುನಿಪ್ರಣೀತಂ' ಎಂದು ಮುನಿ ವಾಲ್ಮೀಕಿಗಳೇ ಹೇಳಿರುವುದರಿಂದ ರಾಮಚರಿತವೆಂದು ಅರ್ಥಮಾಡುವುದೇ ಸೂಕ್ತವಾಗಿದೆ.

ಕಾವ್ಯಂ ರಾಮಾಯಣಂ ಕೃತ್ಸ್ನಂ
ಸೀತಾಯಾಃ ಚರಿತಂ ಮಹತ್
ಪೌಲಸ್ತ್ಯವಧಮಿತ್ಯೇವ
ಚಕಾರ ಚರಿತ ವ್ರತಃ
ದಶಶಿರಸಶ್ಚವಧಂ ನಿಶಾಮಯಧ್ವಂ

ಸಮಸ್ತರಾಮಾಯಣಕಾವ್ಯವೂ (ಶ್ರೀ) ಸೀತಾದೇವಿಯ ಚರಿತೆಯೇ. ಇದರಲ್ಲಿ ಶ್ರೀರಾಮಚರಿತೆ ಅಪ್ರಧಾನವೆಂದೂ ಸೀತಾಚರಿತೆಯೇ ಪ್ರಧಾನವೆಂದೂ ಗೋವಿಂದರಾಜರು ಹೇಳುತ್ತಾರೆ.

ಇದಕ್ಕೆ ಸುಂದರವಾದ ಒಂದು ಉಪಪತ್ತಿ ಇದೆ. ಒಂದು ದಿನ ಶ್ರೀರಾಮನು ಸಭಾಮಧ್ಯದಲ್ಲಿ ಕುಳಿತು ಕುಶಲವರು ಹಾಡಿದ ರಾಮಾಯಣವನ್ನು ಆಸಕ್ತಿಯಿಂದ ಕೇಳುತ್ತಿದ್ದ.

ರಾಮಾಯಣವು ತನ್ನ ಕಥೆಯೇ ಆಗಿದ್ದರೆ, ಅದನ್ನು ಸಭೆಯಲ್ಲಿ ಕೇಳುತ್ತಾ ಕುಳಿತುಕೊಳ್ಳುವುದು ಆ ಧೀರೋದಾತ್ತ ಪುರುಷ ಶ್ರೀರಾಮನಿಗೆ ಯೋಗ್ಯವಾಗಲಾರದು. ಸೀತಾಚರಿತ ಪ್ರಧಾನವಾದ್ದರಿಂದಲೇ ಅದನ್ನು ಶ್ರೀರಾಮಚಂದ್ರನು ಆಲಿಸತೊಡಗಿದನು. ವಿರಹಿಯಾದವನಿಗೆ ಕಾಂತಾವೃತ್ತಾಂತ ಶ್ರವಣವು ಸಹಜವಾದದ್ದು. ಇವರಿಬ್ಬರ ಚರಿತೆಯ ಫಲ ರಾವಣವಧೆ. ಹೀಗೆ ರಾಮಾಯಣ, ಸೀತಾಚರಿತ, ಪೌಲಸ್ತ್ಯವಧೆ ಎಂಬ ಮೂರು ಹೆಸರುಗಳು ಈ ಮಹಾಕಾವ್ಯಕ್ಕೆ ಯೋಗ್ಯವೆನ್ನಿಸಿದರೂ--

ಶ್ರೀ ವಾಲ್ಮೀಕಿಗಳು ಆರಿಸಿಕೊಂಡದ್ದು 'ರಾಮಾಯಣ' ಎಂಬ ಹೆಸರನ್ನೇ. 

# ಷೋಲಿಂಗರ್

---ಶ್ರೀಮತಿ ಎಂ. ಎಸ್. ರಮೇಶ್ ಐ.ಎ.ಎಸ್.

ಮದರಾಸು ಬೆಂಗಳೂರು ಹೆದ್ದಾರಿಯಲ್ಲಿ ಘಟಿಕಾಚಲವೆಂದು ಪ್ರಸಿದ್ಧವಾದ ಷೋಲಿಂಗರ್ ಇದ್ದು, ಅರಕೋಣಂ ಜಂಕ್ಷನ್‌ನಲ್ಲಿ ರೈಲಿಳಿದು ಅಲ್ಲಿಂದ ಪಶ್ಚಿಮಕ್ಕೆ ಬಸ್ ಪ್ರಯಾಣ ಮಾಡಿ ಈ ಸ್ಥಳವನ್ನು ಸೇರಬಹುದು. ಷೋಲಿಂಗರ್‌ನಲ್ಲಿ ನಿಲ್ಲುವ ಪ್ಯಾಸೆಂಜರ್ ರೈಲುಗಳೂ ಇವೆ. ರೈಲ್ವೆನಿಲ್ದಾಣದಿಂದ ೯ ಮೈಲಿ ದೂರದಲ್ಲಿ ದೇವಾಲಯವಿದೆ. ಮದರಾಸು ನಗರದಿಂದ ನೇರ ಬಸ್‌ಗಳೂ ಇವೆ. (ಚಿತ್ತೂರಿನಿಂದಲೂ ಪಳ್ಳಿಪಟ್ಟು ಮಾರ್ಗವಾಗಿ, ತಿರುತ್ತಣಿ ಮಾರ್ಗವಾಗಿ ಷೋಲಿಂಗರ್ ಅನ್ನು ಸೇರಬಹುದು.)

ಈ ಊರು ಬಹು ನಾಮಧೇಯಗಳಿಂದ ಪ್ರಸಿದ್ಧ. ಹಲವರು ಘಟಿಕಾಚಲವೆನ್ನುವರು. ಘಟಿಕಾ ಎಂಬುದು ಕಾಲದ ಒಂದು ಮಾನವಾಗಿದ್ದು ಅಚಲವೆಂಬುದು ಸ್ಥಿರವಾದದ್ದು -- ಬೆಟ್ಟ. ದೇವರು ನೃಸಿಂಹರೂಪಿಯಾಗಿ ಇಲ್ಲಿ ಒಂದು ಘಳಿಗೆಯ ಕಾಲ ಪ್ರಹ್ಲಾದ ಹಾಗೂ ಸಪ್ತರ್ಷಿಗಳಿಗೆ ಪ್ರತ್ಯಕ್ಷನಾಗಿ ಅವರಿಗೆ ಮೋಕ್ಷ ನೀಡಿದನೆಂದು ಹೇಳಲಾಗಿದೆ. ಹಾಗಾಗಿ ಇದನ್ನು ಘಟಿಕಾಚಲವೆಂದರು.

ಈ ಊರನ್ನು ಚೋಳ ಲಿಂಗಪುರವೆಂದೂ ಬಗೆಯಲಾಗಿದೆ. ಇಲ್ಲಿ ಒಬ್ಬ ಚೋಳರಾಜನು ಸ್ವಯಂ ವ್ಯಕ್ತವಾದ ಲಿಂಗವನ್ನು ಕಂಡು ಅದಕ್ಕಾಗಿ ಒಂದು ಗುಡಿಯನ್ನು ಕಟ್ಟಿ ಚೋಳಲಿಂಗೇಶ್ವರನೆಂದು ಕರೆದನಂತೆ. ಹಾಗಾಗಿ ಊರನ್ನು ಚೋಳಲಿಂಗಪುರವೆಂದೂ ನಂತರದಲ್ಲಿ ಚೋಳಸಿಂಗಪುರವೆಂದೂ ಕರೆದು ಅಪಭ್ರಂಶವಾಗಿ ಷೋಲಿಂಗರ್ ಆಗಿರಬೇಕು. ಇದರ ದಾಖಲೆಯಾಗಿ ಊರ ಮಧ್ಯದ ಶಿವ ದೇವಾಲಯವನ್ನು ತೋರಿಸುತ್ತಾರೆ. ಈ ದೇವಾಲಯ ಪ್ರಾಚೀನವೇ ಆದರೂ ಈಗ ಪ್ರಮುಖವಾಗಿಯೇನಿಲ್ಲ. ಕಾರಣ ಇಲ್ಲಿನ ಆಂಜನೇಯ ನರಸಿಂಹ ದೇವಾಲಯಗಳು ಹೆಚ್ಚು ಪ್ರಸಿದ್ಧವಾಗಿ, ಈ ಊರಿನ ಪ್ರಾಮುಖ್ಯ ಈ ಎರಡು ಆಲಯಗಳಿಂದಲೇ ಎನ್ನಬೇಕು. ಆಳ್ವಾರ್‌ಗಳು ಹಾಡಿ ಹೊಗಳಿದ ೧೦೮ ದಿವ್ಯಕ್ಷೇತ್ರಗಳಲ್ಲಿ ಷೋಲಿಂಗರ್ ಒಂದಾಗಿದ್ದು, ಈ ಊರಿನ ಅಧಿದೇವತೆ ನರಸಿಂಹ ಆಗಿರುವುದರಿಂದ ಊರಿನ ಹೆಸರು ವೈಷ್ಣವ ಹಿನ್ನೆಲೆಗೇ ಹೆಚ್ಚು ಹೊಂದಿರಬೇಕು. ಬಹುಶಃ ಚೋಳ ಸಿಂಗಪುರ -- ಸಿಂಹದ ಊರು -- ಎಂಬ ಅರ್ಥದಲ್ಲಿ -- ಎಂಬ ಹೆಸರು ಪಡೆದಿದ್ದು ಅಪಭ್ರಂಶವಾಗಿ ಷೋಲಿಂಗರ್ ಆಗಿರಬೇಕು ಎನ್ನುವುದೇ ಸೂಕ್ತ.

ಈ ಕ್ಷೇತ್ರದ ಆಲಯದ ಸ್ಥಳ ಪುರಾಣ ಉಪಲಬ್ಧವಿಲ್ಲ. ಆಳ್ವಾರರ ಪಾಶುರಗಳಿಂದಲೂ ಇಲ್ಲಿನ ದೇವರ ಪ್ರಸಿದ್ಧ ಭಕ್ತರ ಜೀವನದಿಂದಲೂ ಸ್ಥಳದ ಹಾಗೂ ದೇವಾಲಯದ ಮಹತ್ವ ತಿಳಿಯಬಹುದು. ಆಳ್ವಾರರು ಈ ದೈವವನ್ನು ವಿವಿಧ ರೀತಿಯಲ್ಲಿ ಹೆಸರಿಸಿದ್ದಾರೆ. ಅಕ್ಕರಕಾಣಿ (ಸಿಹಿಹಣ್ಣು) ಮಿಕ್ಕನ್ (ಅನುಪಮ) ತಕ್ಕನ (ಅರ್ಹ) ಪುಕ್ಕನ್ (ಅಂತರ್ಯಾಮಿ) ಇಳಂಕುಮಾರನ್ ಇತ್ಯಾದಿಯಾಗಿ. ಸಂಸ್ಕೃತದಲ್ಲಿ ಈತನನ್ನು ಭಕ್ತೋಚಿತ -- ತನಗೆ ಕಷ್ಟವಾದರೂ ಲೆಕ್ಕಿಸದೆ ಭಕ್ತರಕ್ಷಣೆಗಾಗಿ ಧಾವಿಸುವವ -- ಎನ್ನಲಾಗಿದೆ.

ಊರನ್ನು ಪ್ರವೇಶಿಸುತ್ತಿರುವಂತೆಯೇ ಎರಡು ಬೆಟ್ಟಗಳನ್ನು ಕಾಣದೆ ಇರಲಾಗದು. ಪೆರಿಯ ಮಲೈ (ದೊಡ್ಡಬೆಟ್ಟ)ವೆನ್ನುವ ಎತ್ತರದ ಪರ್ವತದ ಮೇಲೆ ನರಸಿಂಹರೂಪಿ ಪರಮಾತ್ಮ ಇದ್ದರೆ ಚಿನ್ನಮಲೈ (ಕಿರಿಯ ಬೆಟ್ಟ)ಯಲ್ಲಿ ಆಂಜನೇಯಸ್ವಾಮಿ ಇದ್ದಾನೆ. ಎರಡೂ ಬೆಟ್ಟಗಳ ನಡುವೆ ಇರುವ ಹಳ್ಳಿಯನ್ನು ಕೊಂಡಪಾಳಯಂ ಎನ್ನುವರು. ಬೆಟ್ಟದೂರೆಂಬ ರ್ಥದ ಈ ಊರು ಬೆಟ್ಟಗಳನ್ನು ಏರಲು ತಳಹದಿಯಾಗುತ್ತದೆ. ಪೆರಿಯ ಮಲೆಗೆ ಸುಮಾರು ಒಂದು ಸಾವಿರ ಕಲ್ಲಿನ ಮೆಟ್ಟಿಲುಗಳು ರಾಯೋಜಿ ಎಂಬಾತ ನಿರ್ಮಿಸಿದ ಈ ಸೋಪಾನ ಪಂಕ್ತಿ ಚೆನ್ನಾಗಿ ಸದೃಢವಾಗಿದೆ. ಈ ಮೆಟ್ಟಿಲುಗಳನ್ನೇರಿ ಬೆಟ್ಟದ ಮೇಲೆ ತಂಪಾದ ಗಾಳಿಯ ಬಯಲಿಗೆ ಬಂದರೆ ಅಲ್ಲಿಂದ ದೂರದ ಕಣಿವೆಯ ಸೊಂಪಾದ ಬೆಳೆಯ ದೃಷ್ಯ ಮನಮುಟ್ಟುವಂತಹದು.

ಬಯಲು ಭೂಮಿಯಿಂದ ಭೈರೇಶ್ವರನ ಆಜ್ಞೆಯಂತೆ ಮೇಲೆದ್ದ ಬೆಟ್ಟ ಬೆಳೆಯುತ್ತಿದ್ದಂತೆ ಇಂದ್ರನಿಗೆ ಭಯಹುಟ್ಟಿ ಬಲರಾಮನನ್ನು ಈಗಿರುವ ಎತ್ತರಕ್ಕೆ ಬರುವವರೆಗೆ ಅದುಮಿಡಲು ಕೇಳಿಕೊಂಡನಂತೆ. ಇಲ್ಲಿನ ನೋಟದ ಹಾಸಿನಲ್ಲಿ ೧೪ ಶಿಖರಗಳಿವೆಯೆಂಬ ಪ್ರತೀತಿಯಿದ್ದರೂ ನರಸಿಂಹನ ಆವಾಸಸ್ಥಾನವಾದ ಪೆರಿಯ ಮಲೈಗೇ ಪ್ರಾಶಸ್ತ್ಯ.

ಊರಿಗೆ ಬರುವ ಯಾತ್ರಿಕರಿಗೆ ಅನ್ನಸಂತರ್ಪಣೆಗೆಂದು ರಾಯೋಜಿ ಕಟ್ಟಿಸಿದ ಸತ್ರವೊಂದಿದೆ. ಆತನೇ ತೋಡಿಸಿದ ಒಂದು ಬಾವಿಯೂ -- ದೇವಾಲಯದ ಎತ್ತರದಷ್ಟೆ ಆಳವಾದದ್ದು ಎಂದು ಹೆಸರುವಾಸಿಯಾದದ್ದು -- ಇದೆ.

ನರಸಿಂಹ ದೇವರು ಪೂರ್ವಾಭಿಮುಖವಾಗಿದ್ದು ಯೋಗನರಸಿಂಹ ರೂಪದಲ್ಲಿದ್ದಾನೆ. ಅಮೃತವಲ್ಲಿ ತಾಯಾರ್ ಎಂದು ಹೆಸರಾದ ದೇವಿಗೆ ಪ್ರತ್ಯೇಕ ದೇವಾಲಯವಿದೆ.

ಮೂಲ ಮೂರ್ತಿ ನರಸಿಂಹನ ಮುಖಮುದ್ರೆ ಪ್ರಶಾಂತವಾಗಿದ್ದು ಮನಸೆಳೆಯುವ ವಿಗ್ರಹವಾಗಿದೆ. ತಿರುಮಂಗೈ ಆಳ್ವಾರರು ಈತನನ್ನು ತಕ್ಕನ್ -- ಬಹುಶಃ ತಕ್ಕ ಪೆರುಮೈ ಉಡೆಯವನ್ ಎಂಬರ್ಥದಲ್ಲಿ (ಯೋಗ್ಯ ಹಿರಿಮೆಯುಳ್ಳವನು) ಕರೆದಿದ್ದಾರೆ. ಕಾರಣ ದೇವರು ಕೃಪಾಕರ, ದಯಾಶೀಲನಾದವನು. ಆಳ್ವಾರರು ದೈವದ ಅವತಾರದಲ್ಲಿ ತಲ್ಲೀನರಾಗಿ ಸಿಹಿಫಲವೆನ್ನುವರು. ಮೂಲವರಿಗೆ ತಿರುಮಂಜನ -- ಅಭಿಷೇಕ -- ಶುಕ್ರವಾರಗಳಲ್ಲಿ ಮತ್ತು ನರಸಿಂಹ ಜಯಂತಿಗಳಂದು ಮಾತ್ರ. ನರಸಿಂಹ ದೇವರ ಉತ್ಸವಮೂರ್ತಿಗಳನ್ನು ಬೆಟ್ಟದ ಮೇಲಿನ ಗುಡಿಯಲ್ಲಿ ಅಲ್ಲದೆ ಷೋಲಿಂಗರ್‌ನ ಪೆರುಮಾಳ್ ಕೋಯಿಲ್‌ನಲ್ಲಿ ಇಡಲಾಗಿದೆ.

ಚಿನ್ನ ಮಲೈ ಅಥವಾ ಕಿರಿಯ ಬೆಟ್ಟದಲ್ಲಿನ ಅಧಿದೇವತೆಯೋಗ ಆಂಜನೇಯ. ಪಕ್ಕದ ಬೆಟ್ಟದಷ್ಟು ಪ್ರಸಿದ್ಧವಾಗದಿದ್ದರೂ ಸಾಕಷ್ಟು ಹೆಸರಾದದ್ದು. ಈ ಬೆಟ್ಟ ಸುಮಾರು ಇನ್ನೂರು ಅಡಿ ಎತ್ತರವಾಗಿರಬಹುದು. ಈ ದೇವಾಲಯ ಪಶ್ಚಿಮಾಭಿಮುಖವಾಗಿದ್ದು ನರಸಿಂಹ ದೇವರತ್ತ ಆಂಜನೇಯ ಸ್ವಾಮಿ ನೇರವಾಗಿ ಮುಖ ಮಾಡಿದಂತಿದೆ. ನಾಲ್ಕು ಕೈಗಳನ್ನು ಹೊಂದಿದ್ದು ಮೇಲಿನ ಎರಡೂ ಕೈಗಳಲ್ಲಿ

ಮೇ ತಿಂಗಳಿನಲ್ಲಿ ಹನುಮತ್ ಜಯಂತಿ ಹಾಗೂ ನರಸಿಂಹ ಜಯಂತಿಗಳುಂಟು. ಷೋಲಿಂಗರ್ ಹನುಮನರಸಿಂಹರಿಬ್ಬರಿಗೂ ಪ್ರಿಯವಾದದ್ದು. ಎಂತಲೇ ತಿ.ತಿ.ದೇ. ಪ್ರಕಟನೆಯಾದ 108 ವೈಷ್ಣವ ದಿವ್ಯದೇಶಗಳು ಸಂ-1 ಆಂಗ್ಲ ಪುಸ್ತಕದಿಂದ ಷೋಲಿಂಗರ್ ಕ್ಷೇತ್ರ ವಿವರವನ್ನಿಲ್ಲಿ ಸಾದರಪಡಿಸಲಾಗಿದೆ.
ಸಂ||

ವಿಷ್ಣುವಿನ ಆಯುಧಗಳಾದ ಶಂಖು ಚಕ್ರಗಳನ್ನು ಹಿಡಿದಿದ್ದಾನೆ. ದೇರೆಲ್ಲೂ ಕಂಡು ಬರಮ ಎಂಬ ಪ್ರಸಿದ್ಧಿಯಿರುವ ಈ ಆಂಜನೇಯ ಸ್ವಾಮಿ ದೇವರ ಆಜ್ಞೆಯನ್ನು ಕೂಡಲೇ ನೆರವೇರಿಸಲು ಈ ರೀತಿಯಾಗಿ ವೀರಾಂಜನೇಯನಾಗಿದ್ದಾನೆ ಎನ್ನುವುದುಂಟು. ಈ ಬಗ್ಗೆ ಒಂದು ಕಥೆಯುಂಟು. ವಡಮದುರೆಯನ್ನು ಆಳುತ್ತಿದ್ದ ರಾಜ ಇಂದ್ರದ್ಯುಮ್ನ. ಒಂದು ದಿನ ಬೇಟೆಗಾಗಿ ಹೋದ ಆತನ ದಾರಿಗಡ್ಡವಾಗಿ ಒಂದು ಜಿಂಕೆ ಕಂಡುಬಂದಿತು. ಅದನ್ನು ಬೇಟೆಯಾಡಲು ಹಿಂಬಾಲಿಸಿದ ರಾಜ ಬಹುಜಿಂಕೆಗಳಿದ್ದ ಸ್ಥಳವನ್ನು ತಲುಪಿದ. ಇಷ್ಟರಲ್ಲಿ ಓಡಿ ದಣಿದ ಮೊದಲಜಿಂಕೆ ತನ್ನ ಕೊನೆಗಾಲ ಬಂದಿತೆಂದರಿತು ಕಣ್ಣೀರು ತುಂಬಿ ರಾಜನ ಎದುರಿಗೆ ನಿಂತಿತು. ರಾಜನು ಕೊಲ್ಲದೇ ಕೆಂದಿದ್ದ ಜಿಂಕೆಯ ಪ್ರಾಣವನ್ನು ಉಳಿಸಬೇಕೆಂದು ಮತ್ತೊಂದು ಹೆಣ್ಣುಜಿಂಕೆ ರಾಜನಲ್ಲಿ ಮೊರೆಯಿಟ್ಟಿತು. ಬೇಟೆಯ ಮೂಲಕ ಆಗಬಹುದಾದ ವ್ಯರ್ಥ ಪ್ರಾಣಹಾನಿಯ ಬಗ್ಗೆ ರಾಜನು ಯೋಚಿಸುವಂತಾಗಿ ಬೇಟೆಯನ್ನೇ ಬಿಟ್ಟುಬಿಟ್ಟ. ಈ ಇಂದ್ರದ್ಯುಮ್ನ ರಾಜ ಈ ಮೊದಲು ಕುಂಭೋದ್ಭವ ಎಂಬ ರಾಕ್ಷಸನನ್ನು ಸಂಹರಿಸಿದ್ದ. ಈ ಯುದ್ಧದಲ್ಲಿ ಇಂದ್ರದ್ಯುಮ್ನನಿಗೆ ನೆರವಿಗೆಂದು ಇಂದ್ರನು ತನ್ನ ರಥವನ್ನೂ ವಜ್ರಾಯುಧವನ್ನೂ ನೀಡಿದ್ದ. ಇತರ ದೇವತೆಗಳೂ ಅವನು ಬಯಸಿದ ಆಯುಧಗಳನ್ನು ನೀಡಿ ಸಹಕರಿಸಿದ್ದರು. ಆಗ ನರಸಿಂಹನ ಆಜ್ಞೆಯಂತೆ ಆಂಜನೇಯಸ್ವಾಮಿ ಚತುರ್ಬಾಹುವಾಗಿ ರಾಜನ ನೆರವಿಗೆ ನಡೆದಿದ್ದ. ಆಂಜನೇಯಸ್ವಾಮಿ ತನ್ನ ಭಕ್ತರ ನೆರವಿಗೆಂದು ರಾಜನಿಗೆ ನೆರವು ನೀಡಿದಂತೆಯೇ ಓಡಿಬರುವನೆಂದು ನಂಬಲಾಗಿದೆ.

ವಿಷ್ಣು ಸಹಸ್ರನಾಮದಲ್ಲಿ ಹೇಳಿರುವಂತೆ ಆತ ತನ್ನ ಭಕ್ತರ ದೈಹಿಕ ಮಾನಸಿಕ ಆರೋಗ್ಯವನ್ನು ಕಾಪಿಟ್ಟು ರೋಗಗಳನ್ನು ಗುಣಪಡಿಸುವ ಭವ ರೋಗ ವೈದ್ಯನಾಗಿರುವ. ಹಾಗೆಯೇ ಇಲ್ಲಿನ ಆಂಜನೇಯನೂ ಸಹ. ಹನುಮಾನ್ ತೀರ್ಥದಲ್ಲಿ ಮಿಂದು ಆಂಜನೇಯ ಸ್ವಾಮಿಯ ಗುಡಿಗೆ ಬೆಟ್ಟ ಹತ್ತಿಬರುವ ಚಿತ್ತಸ್ವಾಸ್ಥ್ಯವಿಲ್ಲದವರನ್ನೂ ಗಾಳಿಪೀಡಿತರನ್ನೂ ಕಾಣಬಹುದು. ಇಲ್ಲಿ ಪರವಶರಾಗಿ ಉರುಳಸೇವೆ ಮಾಡುವುದನ್ನು ನೋಡುತ್ತೇವೆ. ಗಂಟೆಗಳ ತರುವಾಯ ತೀರ್ಥಪ್ರೋಕ್ಷಣೆಯಿಂದ ಪ್ರಜ್ಞಾಹೀನರಾಗಿ ನಂತರ ಏಳುವಲ್ಲಿ ಗುಣಮುಖರಾಗುವುದನ್ನು ಕಾಣಬಹುದು. ಇಂದಿಗೂ ಅನೇಕ ಶಿಕ್ಷಿತರೂ ಈ ಪವಾಡವನ್ನು ನಂಬುವುದುಂಟು. ರೋಗಿಗಳು ದಿನ ಊರಿನಲ್ಲಿಳಿದುಕೊಂಡು, ದಿನವೂ ಬೆಟ್ಟವನ್ನು ಏರಿ ದೇವರ ದರ್ಶನ ಮಾಡುವರು. ಹಲವು ದಿನಗಳ ನಂತರ ಸ್ವಾಮಿಯ ಅಪ್ಪಣೆ ದೊರೆತ ಮೇಲೆ

ಗುಣಮುಖರಾಗಿ ಹಿಂದಿರುಗುವರು. ಪ್ರಶ್ನೆಯಿಲ್ಲದ ವಿಶ್ವಾಸ, ಅಚಲ ಭಕ್ತಿಗಳಿದ್ದಾಗ ಇಂತಹವು ನಡೆಯದೇನು?

ಈ ಊರಿನ ಸುತ್ತಲೂ ಹಲವಾರು ತೀರ್ಥಗಳಿವೆ. ಅವುಗಳಲ್ಲಿ ಒಂದು ಬ್ರಹ್ಮತೀರ್ಥ. ಈ ತೀರ್ಥದಲ್ಲಿ ಗುರುವಾರಗಳಲ್ಲಿ ಮೀಯುವುದು ಪುಣ್ಯದಾಯಕವೆಂದು ಬಗೆಯಲಾಗಿದೆ. ಬ್ರಹ್ಮನ ಐದು ತಲೆಗಳಲ್ಲಿ ಒಂದನ್ನು ಶಿವನು ತರಿದು ಹಾಕಲು, ಬ್ರಹ್ಮನು ಇಲ್ಲಿಗೆ ಬಂದು ತನ್ನ ಸ್ನಾನಕ್ಕಾಗಿ ಒಂದು ಸರೋವರವನ್ನು ನಿರ್ಮಿಸಿಕೊಂಡು ದಿನವೂ ನರಸಿಂಹಸ್ವಾಮಿಯನ್ನು ತನ್ನ ತಲೆ ಪುನಃ ಬೆಳೆಯುವವರೆಗೆ ಆರಾಧಿಸಿದನಂತೆ. ಆಂಜನೇಯನು ನಿರ್ಮಿಸಿದನೆಂದು ನಂಬಲಾಗುವ ಆಂಜನೇಯತೀರ್ಥವಿದೆ. ಇತರ ಎಲ್ಲ ತೀರ್ಥಗಳೂ ತಮ್ಮವೇ ಕಥೆಗಳನ್ನು ಒಳಗೊಂಡಿವೆ. ವಾಲ್ಮೀಕಿ ಮಹರ್ಷಿಯು ಇಲ್ಲಿನ ಒಂದು ತೀರ್ಥದ ಬಳಿ ತಪಸ್ಸು ಮಾಡಿದನೆಂದೂ, ನಂತರ ನರಸಿಂಹನಿಂದ ರಾಮಾಯಣವನ್ನು ಬರೆಯಲು ಆಜ್ಞಾಪಿತನಾದನೆಂದೂ ಹೇಳಲಾಗಿದೆ.

ಇತಿಹಾಸದಲ್ಲಿ ಷೋಲಿಂಗರ್ ತನ್ನದೇ ಆದ ಸ್ಥಾನವನ್ನು ಪಡೆದಿದೆ. ೧೮ನೇ ಶತಕದ ಕೊನೆಗೆ ೧೭೮೧ ರಲ್ಲಿ ಬ್ರಿಟಿಷರಿಗೂ ಹೈದರಾಲಿಗೂ ನಡೆದ ಎರಡನೇ ಕರ್ನಾಟಕ ಯುದ್ಧದಲ್ಲಿ ಈ ಊರು ಕದನರಂಗವಾಯಿತು. ಆಂಗ್ಲಪಡೆಗಳನ್ನು ಸರ್ ಐರ್ ಕೂಟ್ ಮುನ್ನಡೆಸಿದ್ದ. ಶ್ರೀನಿವಾಸ ಪೆರುಮಾಳ್ ಪುಷ್ಕರಿಣಿಯ ಬಳಿ ಈ ಕದನದಲ್ಲಿ ಮಡಿದ ಸೈನಿಕರ ನೆನಪಿನ ಶಿಲೆಯನ್ನು ನೋಡಬಹುದು.

ತನ್ನ ಧಾರ್ಮಿಕ ಭಕ್ತಶ್ರೇಷ್ಠರಿಂದಾಗಿ ಷೋಲಿಂಗರ್ ಪ್ರಸಿದ್ಧವಾಗಿದೆ. ಅವರಲ್ಲಿ ಒಬ್ಬರು ಮಣವಾಳ ಮುನಿಗಳ ಶಿಷ್ಯರಾದ ಎರುಂಬಿ ಅಪ್ಪ. ಷೋಲಿಂಗರ್‌ನಿಂದ ಎರಡು ಕಿ.ಮೀ. ದೂರದ ಎರುಂಬೈ ಗ್ರಾಮದಲ್ಲಿ ವಾಸಿಸುತ್ತಿದ್ದ ವರದಾಚಾರ್ಯರನ್ನು ಅಪ್ಪನ್ ಎಂದೇ ಗೌರವದಿಂದ ಕರೆಯುತ್ತಿದ್ದುದ್ದರಿಂದ ಅವರನ್ನು ಎರುಂಬಿ ಅಪ್ಪ ಎಂದೇ ತಿಳಿಯಲಾಗಿದೆ. ಇವರು ನರಸಿಂಹಸ್ವಾಮಿಯ ಅಂತರಂಗ ಭಕ್ತರಾಗಿದ್ದು ಸಂಸ್ಕೃತದಲ್ಲಿ ಅಮೃತಫಲವಲ್ಲಿ ಶತಕವನ್ನು ಬರೆದು ದೇವರಿಗೆ ಅರ್ಪಿಸಿದ್ದಾರೆ. ಇಂದಿಗೂ ಎರುಂಬಿ ಅಪ್ಪನ್ ಅವರ ನೆನಪಿನಲ್ಲಿ ಸ್ಥಾಪಿತವಾಗಿರುವ ದತ್ತಿಯಿಂದ ಫಂಗುಣಿ ಉತ್ತರಾದ ಹನುಮ ಜಯಂತಿಯನ್ನು ವೈಭವದಿಂದ ಆಚರಿಸಲಾಗುತ್ತಿದೆ.

ಈ ಸ್ಥಳದ ಮತ್ತೊಬ್ಬ ಹಿರಿಯ ಭಕ್ತರು ದೊಡ್ಡಾಚಾರ್ಯರು. ಇವರು ಕಂಚಿಯ ವರದರಾಜಸ್ವಾಮಿಯ ಭಕ್ತರೂ ಆಗಿದ್ದು ಪ್ರತಿವರ್ಷವೂ ವರದರಾಜಸ್ವಾಮಿಯ ಗರುಡೋತ್ಸವವನ್ನು ದರ್ಶಿಸಿ ಬರುತ್ತಿದ್ದರು. ಒಮ್ಮೆ ಅನಾರೋಗ್ಯ ಕಾರಣದಿಂದಲೂ, ವಯಸ್ಸಾದದ್ದರಿಂದಲೂ ಕಂಚಿಗೆ ಹೋಗಲಾಗಲಿಲ್ಲ. ಬಹು ದೇಸರದಿಂದ ಮನದಲ್ಲೇ ಚಿಂತಿಸುತ್ತಿದ್ದ ಅವರ ಮನದ ಕಣ್ಣೆದುರಿಗೆ ಗರುಡವಾಹನನಾದ ಸ್ವಾಮಿ ಬಂದಂತೆ ಆಯಿತು. ಅವರು ಷೋಲಿಂಗರ್‌ನ ತಕ್ಕನ್ ಕೊಳಂನ ದಡದಲ್ಲಿ ನಿಂತು ವರದರಾಜನನ್ನು ಸ್ತುತಿಸುತ್ತ ಐದು ಶ್ಲೋಕಗಳನ್ನು ಹೇಳಿದರು. ಇದು ದೇವರಾಜ ಪಂಚಕಂ ಎಂಬ ಹೆಸರಿನ ಭಕ್ತನ ಭಗವದ್ವಿರಹವನ್ನು ವಿವರಿಸುವ ಕೃತಿಯಾಗಿದೆ. ಕಂಚಿಯ ವರದರಾಜನನ್ನು ಗರುಡ ವಾಹನದಲ್ಲಿ ಮೆರವಣಿಗೆಯಲ್ಲಿ ಕರೆದೊಯ್ದಾಗ ಮಹಾದ್ವಾರ ಗೋಪುರದ ಬಳಿ ಕ್ಷಣಕಾಲ ನಿಲ್ಲುವಂತೆ ಮಾಡಿದ ವರದರಾಜ ತನ್ನ ಭಕ್ತನಿಗೆ ತಾನು ಗರುಡಾರೂಢನಾಗಿರುವುದು ಷೋಲಿಂಗರ್‌ನಿಂದಲೇ ನೋಡುವ ಅವಕಾಶವನ್ನು ನೀಡಿದ. ಇಂದಿಗೂ ಗರುಡಾರೂಢ ವರದರಾಜಸ್ವಾಮಿ ದೇವಾಲಯಗೋಪುರದ ಬಳಿ ಈ ನೆನಪಿನಲ್ಲಿ ತುಸು ಹೊತ್ತು ನಿಲ್ಲುವಂತಾಗಿ, ದೂರದ ಷೋಲಿಂಗರ್‌ನ ಭಕ್ತರೂ ಸ್ಪಷ್ಟವಾದ ದರ್ಶನ ಪಡೆಯಲು ಅವಕಾಶ ನೀಡುವಂತೆ ಮಾಡಲಾಗಿದೆ. ಈ ಸಂಗತಿಯ ಸಾಕ್ಷಿಯೆಂಬಂತೆ ಷೋಲಿಂಗರ್‌ನ ಬ್ರಹ್ಮತೀರ್ಥಕೊಳದ ಬಳಿ ಗರುಡಾರೂಢ ವರದರಾಜನ ಚಿಕ್ಕದಾದ ಗುಡಿಯೊಂದಿದೆ. ಷೋಲಿಂಗರ್‌ನ ವರದರಾಜನ ಗರುಡೋತ್ಸವವೂ ಕಂಚಿಯ ವರದರಾಜಸ್ವಾಮಿಯ ಗರುಡೋತ್ಸವದ ಹೊತ್ತಿಗೆ ಸರಿಯಾಗಿ ನಡೆಯುವುದು.

ಷೋಲಿಂಗರ್ ಅನ್ನು ಮೊದಲೇ ತಿಳಿಸಿದಂತೆ ಘಟಿಕಾಚಲ ಎಂದೂ ಕರೆಯಲಾಗಿದೆ. ಗುರುಪರಂಪರೆಯಂತೆ ಚೋಳಸಿಂಹಪುರವೆಂದೂ ಶಾಸನಗಳಲ್ಲಿ ಕಂಡುಬರುವಂತೆ ಚೋಳಪುರಿ ಎಂದೂ ಕರೆಯುವುದುಂಟು. ಗುರುಪರಂಪರೆಯೂ ವೆಂಕಟಾದ್ರಿಯ ವಿಶ್ವಗುಣಾದರ್ಶವೂ ಈ ಸ್ಥಳವನ್ನು ಉಲ್ಲೇಖಿಸುತ್ತವೆ. ಸತ್ಸಂಪ್ರದಾಯ ಮುಕ್ತಾವಳಿ ಹೇಳುವಂತೆ ಅಹೋಬಿಲ ಮಠದ ಸ್ಥಾಪಕರಾದ ಆದಿವಣ್ ಶಟಗೋಪಸ್ವಾಮಿಗಳು ದೇವಾಲಯವನ್ನು ನೋಡಿಕೊಳ್ಳುತ್ತಿದ್ದರು. ಕಾಲಕ್ರಮದಲ್ಲಿ ಅಪ್ಪಯ್ಯ ದೀಕ್ಷಿತರು ಹಾಗೂ ಕೋಟಿ ಕನ್ಯಾದಾನದ ತಾತಾಚಾರ್ಯರುಗಳ ಸಮಕಾಲೀನರಾದ ದೊಡ್ಡಾಚಾರ್ಯರ ಪ್ರಭಾವೀವಂಶದ ಕೈಸೇರಿತು. ಇಲ್ಲಿನ ಕೊಳದ ಬಳಿಯ ಬಂಡೆಯ ಮೇಲಿನ ಒಂದು ಶಾಸನ ಪರಾಂತಕ ಚೋಳ I ನ ರಾಜ್ಯಭಾರದ ೩ನೇ ವರ್ಷದ್ದಾಗಿದೆ. ಇದು ಗಂಗರಸಾಮಂತ, ಬಾಣರಾಜನಾದ ಪೃಥ್ವೀಪತಿ II ನೇ ಹಸ್ತಿಮಲ್ಲನನ್ನು ಹೆಸರಿಸುತ್ತದೆ. ಹಸ್ತಿಮಲ್ಲನು ಪರಿವಿಪುರನಾಥನೆಂದೂ ಹೇಳಲಾಗಿದೆ. ಪರಾಂತಕನು ಕೊಳದ ಜೀರ್ಣೋದ್ಧಾರಕ್ಕಾಗಿ ಭತ್ತದ ಗದ್ದೆಯನ್ನು ದಾನನೀಡಿದ ವಿಷಯವನ್ನು ಈ ಶಾಸನ ಹೇಳುತ್ತದೆ. ಆಂಜನೇಯಸ್ವಾಮಿ ದೇವಾಲಯದ ಕಲ್ಲಿನ ಒಂದು ಶಾಸನ ಪೆನುಗೊಂಡೆಯ ವಿಜಯನಗರದರಸ ರಾಮದೇವಮಹಾರಾಯನ ಕಾಲದ ಸಂಗತಿಯೊಂದನ್ನು ಕುರಿತು ಹೇಳುತ್ತದೆ.

ಪೇಯ್ ಆಳ್ವಾರ್ ಹಾಗೂ ತಿರುಮಂಗೈ ಆಳ್ವಾರರು ಈ ದೈವವನ್ನು ಕುರಿತು ನಾಲ್ಕು ಪಾಶುರಗಳನ್ನು ಹಾಡಿದ್ದಾರೆ. ದಿವ್ಯಕವಿ ಪಿಳ್ಳೈ ಪೆರುಮಾಳ್ ಅಯ್ಯಂಗಾರ್ಯರು ೧೦೮ ತಿರುಪತಿ ಅಂತಾದಿಗಳಲ್ಲಿ ಈ ಕ್ಷೇತ್ರದ ದೈವದ ಬಗ್ಗೆಯೂ ಹಾಡಿದ್ದಾರೆ.



**108 ವೈಷ್ಣವ ದಿವ್ಯದೇಶಗಳು ಸಂ-1, ಲೇ: ಶ್ರೀಮತಿ ಎಂ.ಎಸ್. ರಮೇಶ್,** ತಿ.ತಿ.ದೇ. ಪ್ರಕಟಣ ವಿಭಾಗ, ತಿರುಪತಿ. ಬೆಲೆ -- 33ರೂ. -- ಪುಟಗಳು --12+166,

ಪುಸ್ತಕ ಆಂಗ್ಲಭಾಷೆಯಲ್ಲಿದ್ದು ತೊಂಡನಾಡಿನ 19 ದೇವಾಲಯಗಳ ವಿವರಗಳಿವೆ. ಆಕರ್ಷಕ ವರ್ಣಚಿತ್ರಗಳಿವೆ. ಅಂಚೆವೆಚ್ಚ ಪ್ರತ್ಯೇಕ.





# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ:

ಶ್ರೀನಿವಾಸನ ಹಾಡುಗಳು-ಭಾಗ-೨ (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) ೪-೫೦
ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) -ವಿ. ಬಾದರಾಯಣ ಮೂರ್ತಿ ೧೨-೫೦
ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ) -ಬನ್ನಂಜೆ ಗೋವಿಂದಾಚಾರ್ಯ ೭-೦೦
ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) -ಸಂ. ಕೆ. ಅಪ್ಪಣ್ಣಾಚಾರ್ಯ ೩-೭೫
ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) - ಸಂ. ಕೆ. ಅಪ್ಪಣ್ಣಾಚಾರ್ಯ ೨-೨೫
ಸ್ತೋತ್ರ ಕುಸುಮಮಾಲಾ -ಸಂ. ವೆಂಕಟಾಚಲ ೩-೦೦
ಆಚಾರಗಳು ಆಡಂಬರಗಳು -ಕೆ. ಚಂದ್ರಮೌಳಿ ೦-೪೦
ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೦-೫೦
" " (ಕನ್ನಡ ಲಿಪಿಯಲ್ಲಿ) ೦-೧೨

### ಮಕ್ಕಳಿಗಾಗಿ:

ಶ್ರೀಪಾದರಾಜರು -ಎಂ. ಎಸ್. ಗುಂಡೂರಾವ್ ೦-೭೫
ಮಹಿಪತಿದಾಸರು -ಶಾನಭಾಗ ೦-೮೫
ಪ್ರಸನ್ನ ವೆಂಕಟದಾಸರು -ವಿ. ಬಾದರಾಯಣಮೂರ್ತಿ ೦-೮೦
ಗೋಪಾಲದಾಸರು -ರುಕ್ಮಿಣಿಗಿರಿಮಾಜಿ ೦-೭೫

### ಹಿಂದಿ:

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ -ಡಾ. ಎಂ. ಸಂಗಮೇಶಂ ೦-೨೦
ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) ೧೧-೦೦
ತೀರ್ಥರಾಜ ತಿರುಪತಿ -ಡಾ. ಎಂ. ಸಂಗಮೇಶಂ ೧-೫೦

### ಸಂಸ್ಕೃತ:

ಶ್ರೀ ವೇಂಕಟೇಶ್ವರ ಸುಪ್ರಭಾತಂ ೦-೧೨
ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ ೦-೬೨
ಕಠೋಪನಿಷತ್ -ಡಾ. ಕೆ. ಸಿ. ವರದಾಚಾರಿ ಹಾಗೂ ಡಾ. ಡಿ. ತಾತಾಚಾರ್ಯ ೧೫-೦೦
ಮಾರ್ಕಂಡೇಯ ಸಂಹಿತಾ ೧೮-೦೦
ತತ್ತ್ವಸಂಖ್ಯಾನಂ -ಆರ್. ರಾಮಮೂರ್ತಿ ಶರ್ಮಾ ೨-೦೦
ಬ್ರಹ್ಮಸೂತ್ರ ಭಾಷ್ಯ (ಭಾಗ-೧) -ಆರ್. ರಾಮಮೂರ್ತಿ ಶರ್ಮಾ ೩೦-೦೦
ಅಲಂಕಾರ ಸಂಗ್ರಹ ಸಂ-ಕೆ. ಭಾಸ್ಕರರಾವ್ ೧೬-೦೦
ಸೀತಾರಾಮಾಂಜನೇಯಂ -ಡಾ. ಡಿ. ಅರ್ಕಸೋಮಯಾಜಿ ೫೦-೦೦
ಪ್ರಶ್ನೋಪನಿಷತ್ ೧೧-೦೦
ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ -ಸಂ-ಡಾ. ಎಸ್. ಬಿ. ರಘುನಾಥಾಚಾರ್ಯ ೨೫-೦೦

೧೦೦೦ ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ ೩೦ಶತಾಂಶ ರಿಯಾಯಿತಿಯೂ, ೫೦೦ ರೂಗಳಿಂದ ೧೦೦೦ ರೂ.ವರೆಗೆ ೨೫ಶತಾಂಶ ರಿಯಾಯಿತಿಯೂ, ೧೦೦ ರೂ.ಗಳಿಂದ ೫೦೦ ರೂ.ವರೆಗೆ ೧೫ಶತಾಂಶ ರಿಯಾಯಿತಿಯೂ ಉಂಟು

ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ.

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

ತಾಮಸ ಶಕ್ತಿಯ ಸದ್ದಡಗಿಸಲು ಶ್ರೀಹರಿಯು ತೊಟ್ಟ ಅವತಾರವೇ ನರಸಿಂಹಾವತಾರ ಎಂಬುದು ಜನ ಜನಿತ. ದುಷ್ಟ ನಿಗ್ರಹ, ಶಿಷ್ಟ ಪಾಲನೆಗಾಗಿ ಪ್ರಾದುರ್ಭವಿಸಿದ ಮಹಿಮಾನ್ವಿತ ನರಸಿಂಹ ದೇವ ಸ್ಥಾನಗಳು ಪವಿತ್ರ ಕ್ಷೇತ್ರಗಳೆನಿಸಿವೆ.

ಅವುಗಳಲ್ಲಿ ವಿಜಾಪುರ ಜಿಲ್ಲೆಯ ತೊರವಿ, ಶೂರ್ಪಾಲಿ, ಗಲಗಲಿ, ಮುತ್ತಗಿ ಗಳಲ್ಲಿಯ ಶ್ರೀ ಲಕ್ಷ್ಮೀ ನರಸಿಂಹ ದೇವಾಲಯಗಳು ಪ್ರಾಚೀನವಾದವುಗಳು.

## ವಿಜಾಪುರ ಜಿಲ್ಲೆಯ

# ನರಸಿಂಹ ಕ್ಷೇತ್ರಗಳು

---ತುಂಗಾತನಯ.

### ತೊರವಿ :

ಮುಸಲ್ಮಾನರ ಆಳ್ವಿಕೆಯ ಕಾಲದಲ್ಲಿ ವಿಜಾಪುರಕ್ಕೆ ಅತ್ಯಂತ ಸಮೀಪವಾಗಿದ್ದರೂ ಯಾವ ಮೂರ್ತಿ ಭಂಜಕನ ಕಾಕದೃಷ್ಟಿಗೂ ಬೀಳದೆ ಇರುವ ವೈಶಿಷ್ಟಪೂರ್ಣವಾದ ದೇವಸ್ಥಾನ ತೊರವಿ ಶ್ರೀ ಲಕ್ಷ್ಮೀನರಸಿಂಹನದು. ಕನ್ನಡ ಸಾಹಿತ್ಯಕ್ಕೆ ತೊರವಿ ರಾಮಾಯಣದಂತಹ ಕೃತಿಯನ್ನು ನೀಡಿದ ಕುಮಾರ ವಾಲ್ಮೀಕಿಯು ತೊರವಿ ಗ್ರಾಮದವನೆಂಬುದನ್ನು ನೆನೆದಾಗ ಈ ಕ್ಷೇತ್ರದ ಮಹಿಮೆಯು ಇನ್ನೂ ಹೆಚ್ಚುತ್ತದೆ. ಪುರಾತನವಾದ ಗುಹಾಂತರ್ಗತ ನರಸಿಂಹ ಮೂರ್ತಿ ಅತ್ಯಂತ ಆಕರ್ಷಕವಾಗಿದ್ದು. ತೊರವೆಯು ರಾಜಧಾನಿಯಾಗಿದ್ದ ಕಾಲದಲ್ಲಿ ಆದಿಲಶಾಹನು ಶ್ರೀ ನೃಸಿಂಹದೇವರ ಭಕ್ತನಾಗಿದ್ದನೆಂದೂ ಹೇಳುವರು. ಕುಮಾರ ವಾಲ್ಮೀಕಿ ಇದೇ ಸ್ಥಳದಲ್ಲಿ ರಾಮಾಯಣ ರಚಿಸಿದ್ದು ಎಲ್ಲರಿಗೂ ತಿಳಿದ ಸಂಗತಿ.

### ಶೂರ್ಪಾಲಿ :

ಜಮಖಂಡಿ ತಾಲೂಕಿನ ಕೃಷ್ಣಾ ತಟದಲ್ಲಿರುವ ಗ್ರಾಮ ಶೂರ್ಪಾಲಿಯಲ್ಲಿ ನೆಲೆಸಿರುವ ಶ್ರೀ ಲಕ್ಷ್ಮೀ ನರಸಿಂಹ ದೇವರ ದೇವಸ್ಥಾನ ಸಹ ಪುರಾಣ ಪ್ರಸಿದ್ಧವಾದುದು. ಅಶ್ವಥ ವೃಕ್ಷದ ಸಮ್ಮುಖದಲ್ಲಿ ವಿರಾಟ ಮಾನವಾದ ವಿಗ್ರಹ ಸುಂದರವಾಗಿದೆ.

### ಗಲಗಲಿ :

ಸುಮಾರು ೨೫೦ ವರ್ಷಗಳ ಹಿಂದೆ ಉತ್ತರಾದಿ ಮಠಾಧೀಶರಾದ ಶ್ರೀ ವಿದ್ಯಾಧೀಶ ತೀರ್ಥರು ಶೂರ್ಪಾಲಿಯಲ್ಲಿ ವಾಸ್ತವ್ಯಾಗಿದ್ದರು. ಅದೇ ಕಾಲಕ್ಕೆ ಮಹಾಜ್ಞಾನಿಗಳಾದ ಮಾಧವಾರ್ಯರು ಸಹ ಆಗಮಿಸಿದ್ದರೆಂದು ತಿಳಿದು ಬರುತ್ತದೆ. ಶ್ರೀಗಳಲ್ಲಿ ವೇದಾಧ್ಯಯನ ಮಾಡುತ್ತಿದ್ದ ಗಲಗಲಿ ಗೋವಿಂದಾಚಾರ್ಯ ಎಂಬುವರು ಗಾಲವ ಕ್ಷೇತ್ರ ಗಲಗಲಿಯಲ್ಲಿ ವಾಸ ಮಾಡಲು ಆರಂಭಿಸಿದರು.

ಅವರು ದಿನಾಲೂ ಶೂರ್ಪಾಲಿ ನರಸಿಂಹದೇವರ ದರ್ಶನವಿಲ್ಲದೇ ನಿತ್ಯಕರ್ಮ ಮಾಡುತ್ತಿರಲಿಲ್ಲ. ಹೀಗಾಗಿ ದಿನಂಪ್ರತಿ ಶೂರ್ಪಾಲಿಗೆ ಹೋಗಿ ಬರಹತ್ತಿದರು. ಒಂದು ದಿನ ಬರುವಾಗ ಅಶ್ವತ್ಥ ವೃಕ್ಷದ ಟೊಂಗೆಯೊಂದು ಅವರು ಬರುವ ದಾರಿಯಲ್ಲಿ ಬಿದ್ದಿತೆಂದೂ ಅದು ಅಪಶಕುನವೆಂದು ತಿಳಿದ ಅವರು ಅಲ್ಲೇ ಉಪವಾಸ ಕುಳಿತಾಗ, ದೈವ ವಾಣಿಯಿಂದ ಆ ಟೊಂಗೆಯನ್ನು ಗಲಗಲಿಯಲ್ಲಿ ನೆಟ್ಟು ನನ್ನನ್ನು ಅಲ್ಲೆ ಪೂಜಿಸು ಎಂದಂತಾಯಿತಂತೆ, ಮುಂದೆ ಆ ಟೊಂಗೆಯನ್ನು ಗಲಗಲಿಯಲ್ಲಿ ನೆಡಲಾಗಿ ಶ್ರೀ ಲಕ್ಷ್ಮಿ ನರಸಿಂಹ ದೇವರ ಆಗಮೋಕ್ತ ಉತ್ಸವ ಪ್ರಾರಂಭವಾಯಿತು.

ಕಾಲಾನುಸಾರ ಸಿಡಿಲು ಹಾಯ್ದು ವೃಕ್ಷ ಒಣಗಿತು. ಆಗ ಗಲಗಲಿ ಮನೆತನದವರಾದ ಸುಬ್ಬಣಾಚಾರ್ಯರು ಪರಮಭಕ್ತಿಯಿಂದ ಆ ಅಶ್ವತ್ಥ ವೃಕ್ಷದ ಸ್ಥಾನವಲ್ಲಿಯೇ ಶ್ರೀ ಲಕ್ಷ್ಮೀನರಸಿಂಹ ದೇವರ ಪ್ರತಿಮೆಯನ್ನು ಸ್ಥಾಪಿಸಿದರು. ಗೋವಿಂದಾಚಾರ್ಯರು, ರಾಜಗೋಪಾಲಾಚಾರ್ಯರು ಮುಂತಾದವರು ಗಲಗಲಿಯ ಶ್ರೀ ಲಕ್ಷ್ಮೀ ನೃಸಿಂಹ ದೇವರ ಮೇಲೆ ರಚಿಸಿದ ಹಾಡುಗಳು ಪ್ರಸಿದ್ಧವಾಗಿವೆ. ಅನೇಕ ಮಹನೀಯರು ಇಲ್ಲಿಯ ನರಸಿಂಹ ದೇವರ ಸೇವೆಯನ್ನು ಮಾಡಿ ಅಭೀಷ್ಟಗಳನ್ನು ನೆರವೇರಿಸಿಕೊಂಡಿದ್ದಾರೆ.



### ಮುತ್ತಗಿ :

ಬಸವನ ಬಾಗೇವಾಡಿ ತಾಲೂಕಿನ ಮುತ್ತಗಿ ಕ್ಷೇತ್ರದಲ್ಲಿ ಅಶ್ವತ್ಥ ವೃಕ್ಷದಲ್ಲಿ ಪ್ರಾದುರ್ಭವಿಸಿದ ಶ್ರೀ ನರಸಿಂಹ ದೇವಸ್ಥಾನ ಬಹು ಜಾಗೃತವಾದುದು. ಸುಮಾರು ಒಂದು ಸಾವಿರ ವರ್ಷಕ್ಕೂ ಮೇಲ್ಪಟ್ಟು ಹಿಂದಿನದೆಂದು ಹೇಳಲಾಗುವ ಇಲ್ಲಿಯ ಅಶ್ವತ್ಥವೃಕ್ಷದ ಬುಡದಲ್ಲಿ ಶ್ರೀ ಮಧ್ವಾಚಾರ್ಯರು ತಪಃಗೈದಿದ್ದರೆಂದು ಪ್ರತೀತಿ ಇದೆ. ನಾಲ್ಕು ಎಕರೆ ಜಮೀನಿನಷ್ಟು ವಿಸ್ತಾರವುಳ್ಳ ಈ ವೃಕ್ಷ ಭೂಮಿ ಮೇಲೆ ಸೂರ್ಯ ಕಿರಣಗಳೂ ಸಹ ಬೀಳದಷ್ಟು ದಟ್ಟವಾಗಿದೆ.

ಇಲ್ಲಿಯ ಶ್ರೀ ನರಸಿಂಹ ದೇವಸ್ಥಾನಕ್ಕೆ ೩೨ ಎಕರೆ ಡೋಣಿ ಜಮೀನು ನಿತ್ಯ ಪೂಜೆಗಾಗಿ ಕೊಡಲ್ಪಟ್ಟಿದೆ ಎಂದು ಹೇಳಲಾಗುತ್ತಿದೆ. ಹರಪನಹಳ್ಳಿ ಮದ್ವರಾಯರೆಂಬ ಮಾಮಲೇದಾರರು ತಮ್ಮ ಹೆಣ್ಣುಮಗಳ ನೆನಪಿಗಾಗಿ ಅಶ್ವತ್ಥವೃಕ್ಷದಡಿ ೧೯೪೨ ರಲ್ಲಿ ಹೊಸ ಗುಡಿಯನ್ನು ಕಟ್ಟಿಸಿದರೆಂದು ತಿಳಿದುಬರುತ್ತದೆ.

ಅದಕ್ಕೂ ಮೊದಲು ಕೇವಲ 'ಅಶ್ವತ್ಥ ಕಟ್ಟೆ'ಗೆ ಮಾತ್ರ ಪೂಜೆ ನಡೆಯುತ್ತಿದ್ದೆಂದೂ ಮುಂದೆ ಕೆಲ ಕಾಲದ ಬಳಿಕ ಊರಿನ ಕುಲಕರ್ಣಿ ಮನೆತನದ ವರೊಬ್ಬರಿಗೆ ಸ್ವಪ್ನದಲ್ಲಿ ಅಗೆಯಲು ಸೂಚಿಸಿದರಂತೆ, ಅದರಂತೆ ಕೂಡ್ಲಿಗಿ ಗ್ರಾಮಕ್ಕೆ ಹೋಗುವ ದಾರಿಯಲ್ಲಿ ಉರಿಯಿದ್ದ ಸ್ಥಳ ಅಗೆಯಲಾಗಿ ಅಲ್ಲಿ ದೇವರ ಸುಂದರವಾಗಿ ಶಿಲಾಪ್ರತಿಮೆ ದೊರಕಿತೆಂದು ತದನಂತರ ಅದನ್ನು ವಿಧಿವತ್ತಾಗಿ ಸ್ಥಾಪಿಸಲಾಯಿತೆಂದೂ ಊರವರು ಹೇಳುತ್ತಾರೆ.ಅಂದಿನಿಂದ ದಿನಾಲೂ ಸಾಂಗವಾಗಿ ಅದೇ ಪ್ರತಿಮೆಗೆ ಪೂಜೆ ಮಾಡಲಾಗುತ್ತಿದೆ. ಅದರ ಜೊತೆಗೆ ನರಸಿಂಹ ಸಾಲಿಗ್ರಾಮ, ೫ ಸಣ್ಣ ಕಂಬುಗಳನ್ನೊಳಗೊಂಡ ಒಂದು ದೊಡ್ಡ ಶಂಖು; ಅಭಯ ನರಸಿಂಹ, ತಪೋನರಸಿಂಹ, ಉಗ್ರ ನರಸಿಂಹ ಪಂಚಲೋಹದ ಪ್ರತಿಮೆಗಳಿವೆ.

ಶ್ರೀ ನರಸಿಂಹ ದೇವರ ಪ್ರತಿಮೆ ದೊರೆತ ನಂತರ ಅಶ್ವತ್ಥ ವೃಕ್ಷದಲ್ಲಿ ಬಿರುಕು ಬಿಟು ಉತ್ತತ್ತಿ ಬೀಜ





# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ರೂ 6--00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

**ಪೇಷ್ಕಾರ್.**

ದಷ್ಟು ಕೆಂಪು ವರ್ಣದ ಶಿಲೆ ಕಾಣಿಸಹತ್ತಿತಂತೆ. ಅದನ್ನು ಹಾಗೆ ಪೂಜಿಸಲಾರಂಭಿಸಿದಾಗ, ತದನಂತರ ೧೯೪೦ ರ ಸುಮಾರಿಗೆ ಆ ಬಿರುಕು ಕೈ ಹಾಕುವಷ್ಟು ಅಗಲವಾಗಿ ದೇವರ ಕಣ್ಣು ಮೂಗುಗಳು ಕೈಗೆ ಹತ್ತಲಾರಂಭಿಸಿದವಂತೆ, ತೀರಾ ಇತ್ತೀಚೆಗೆ ಅಂದರೆ ೧೯೭೨ ರ ಸುಮಾರಿಗೆ ಬಿರುಕು ಇನ್ನಷ್ಟು ದೊಡ್ಡದಾಗಿ ಈಗ ಅರ್ಧ ದೇಹ ಕಾಣಿಸಲಾರಂಭಿಸಿದೆ.

ಈ ರೀತಿಯಾಗಿ ಮುತ್ತಗಿ ಕ್ಷೇತ್ರದ ನರಸಿಂಹ ಆರಾಧ್ಯ ದೈವನಾಗಿ, ನೆನೆಗವರ ಮನೋಭೀಷ್ಟಗಳನ್ನು ಪೂರೈಸುವ ಕಾಮಧೇನು ಕಲ್ಪವೃಕ್ಷನಾಗಿದ್ದಾನೆ.

ದೇವಸ್ಥಾನಕ್ಕೆ ಆಡಳಿತ ಮಂಡಳಿಯೊಂದಿದ್ದು, ಅದು ಭಕ್ತರ ಸಕಲ ಸೇವೆಗೆ ಸಜ್ಜಾಗಿದೆ. ಜೀರ್ಣೋದ್ಧಾರ ಕಾರ್ಯ ಇನ್ನೂ ಸಾಕಷ್ಟಾಗಬೇಕಿದೆ.

ಕಳೆದ ವರ್ಷವಷ್ಟೆ ಉತ್ತರಾದಿ ಮಠಾಧೀಶ ಶ್ರೀ ಸತ್ಯಪ್ರಮೋದ ತೀರ್ಥರಿಂದ ಉತ್ಸವದ ಸಂದರ್ಭದಲ್ಲಿ ರಥೋತ್ಸವ ಆರಂಭಿಸಲಾಗಿದೆ. ಉತ್ಸವದ ನಿಮಿತ್ತ ಅನೇಕ ಧಾರ್ಮಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ಗುಲಬರ್ಗಾ, ಕೊಪ್ಪಳ, ಸುರಪುರ, ಮಹಾರಾಷ್ಟ್ರ ಇತ್ಯಾದಿ ಕಡೆಗಳಿಂದ ಭಕ್ತಿರು ಮುತ್ತಗಿಗೆ ಬಂದು ಶ್ರೀ ನರಸಿಂಹ ಸ್ವಾಮಿಯಲ್ಲಿ ತಮ್ಮ ಹರಕೆಯನ್ನು ಪ್ರತಿ ವರ್ಷವೂ ಸಲ್ಲಿಸುತ್ತಾರೆ.

ಒಟ್ಟಿನಲ್ಲಿ ಶ್ರೀ ಲಕ್ಷ್ಮೀ ನರಸಿಂಹ ಭಕ್ತರ ಕಷ್ಟಗಳನ್ನು ಪರಿಹರಿಸುತ್ತ, ಅಭಯ ಪ್ರದಾಯಕನಾಗಿ ಜಿಲ್ಲೆಯ ನಾಲ್ಕೂ ಸುಕ್ಷೇತ್ರಗಳಲ್ಲಿ ನೆಲೆಸಿದ್ದಾನೆ.

**ಕೃಪೆ: ಸಂಯುಕ್ತಕರ್ನಾಟಕ.**

### ಶ್ರೀ ಬಾಲಾಜೀ ವಿಕಲಾಂಗ ಆಸ್ಪತ್ರೆ

### ತಿ. ತಿ. ದೇ. ತಿರುಪತಿ.

ತಿರುಮಲೆ ತಿರುಪತಿ ದೇವಸ್ಥಾನಗಳ ಶ್ರೀ ಬಾಲಾಜೀ ವಿಕಲಾಂಗರ ಆಸ್ಪತ್ರೆಯಲ್ಲಿ ಕೃತಕ ಅವಯವಗಳನ್ನು ವಿಕಲಾಂಗರಿಗೆ ಉಚಿತವಾಗಿ ನೀಡುವ ಯೋಜನೆಯಿದ್ದು, ಸದರಿ ಮಾನವೋಪಯೋಗಿ ಯೋಜನೆಗೆ ದಾನಿಗಳು ಉದಾರವಾಗಿ ವಂತಿಗೆಯನ್ನು ನೀಡಲು ಅವಕಾಶವಿದೆ.

ದಾನಿಗಳು ಈ ಅವಕಾಶವನ್ನು ಬಳಸಿಕೊಂಡು ಈ ಘನೋದ್ದೇಶದ ಯೋಜನೆಯ ಸಾಫಲ್ಯಕ್ಕೆ ನೆರವಾಗಬೇಕೆಂದು ಬೇಡಲಾಗಿದೆ.

**ತಿ. ತಿ. ದೇ.**

# ಮನದಲ್ಲಿ ನೆಲೆಸಿಹನು

---ಶ್ರೀ ಶ್ರೀ ಭಾರತೀ ತೀರ್ಥಸ್ವಾಮಿಜೀ.

ಯಾವ ಮನುಷ್ಯನೇ ಆದರೂ ಜೀವನದಲ್ಲಿ ಸುಖವನ್ನು, ಶಾಂತಿಯನ್ನು, ಸಂತೋಷವನ್ನು ಪಡೆಯಬೇಕು ಎಂದೇ ಭಾವಿಸುತ್ತಾನೆ. ಈ ಸುಖ ಸಂತೋಷ ಶಾಂತಿಗಳನ್ನು ಬಯಸದ ಮನುಷ್ಯ ಯಾವ ದೇಶದಲ್ಲೂ ಇಲ್ಲ. ಯಾವ ಕಾಲದಲ್ಲೂ ಇರಲಾರ. ಎಂದರೆ ಇವು ಮನುಷ್ಯನಿಗೆ ಅತ್ಯಂತ ಅವಶ್ಯಕವಾದವು. ಮತ್ತೆ ಏನೇ ಸಂಪಾದಿಸಿದರೂ ಇವು ನಮಗೆ ದೊರೆಯಬೇಕು ಎಂಬುದೇ ನಮ್ಮ ಆಶಯ. ನಾವು ಧನವನ್ನು ಗಳಿಸಿದರೂ, ಕೀರ್ತಿ ಗಳಿಸಿದರೂ, ವಿದ್ಯೆ ಸಂಪಾದಿಸಿದರೂ ಕೊನೆಗೆ ನಮಗೆ ಬೇಕಾದುದು ಸುಖ, ಶಾಂತಿ, ಸಂತಸ. ಎಂತಲೇ ಮಾನವನು ಬಯಸುವ ಈ ಬಯಕೆಗಳಿಗೆ ನಿಜವಾದ ಸಾಧನಗಳಾವುವು ಎಂಬುದನ್ನು ನಮ್ಮ ಹಿರಿಯರು ಚರ್ಚಿಸಿದರು. ಈಗಲೇ ಹೇಳಿದಿರಲ್ಲ -- ಐಶ್ವರ್ಯ, ಅಧಿಕಾರ, ಇವುಗಳೇ ಸಾಧನಗಳೆಂದು; ಮತ್ತೇನಿದೆ ಚರ್ಚಿಸಲಿಕ್ಕೆ? ಎಂದು ನೀವು ಕೇಳಬಹುದು. ಈ ಐಶ್ವರ್ಯ, ಅಧಿಕಾರಗಳಿಂದಾಗಿ ನಮಗುಂಟಾಗುವ ಸುಖವಾಗಲೀ ಶಾಂತಿಯಾಗಲೀ ತತ್ಕಾಲಿಕವೇ ಹೊರತು ಶಾಶ್ವತವಾದುವಲ್ಲ. ಎಂತಹ ಸಿರಿವಂತನೇ ಆದರೂ ಜೀವನದಲ್ಲಿ ಪರಿಪೂರ್ಣವಾದ ಸುಖವನ್ನಾಗಲೀ ಶಾಂತಿಯನ್ನಾಗಲೀ ಹೊಂದಿರುವನೇ ಎಂದು ಕೇಳಿದರೆ ಇಲ್ಲ ಎಂದು ಸ್ಪಷ್ಟವಾಗಿ ಉತ್ತರ ನೀಡುತ್ತಾನೆ. ಅಯ್ಯಾ ನಿಮಗಿಷ್ಟು ಸಿರಿಯಿದೆಯಲ್ಲ ನಿಮಗೇನು ಕೊರತೆಯೆಂದರೆ -- ಐಶ್ವರ್ಯವಿಲ್ಲದಿರುವಾಗಲೇ ನಾನು ಸುಖವಾಗಿದ್ದೆ. ಇದೆಲ್ಲ ಬಂದ ನಂತರವೇ ಸುಖ ಶಾಂತಿ ಕಡಮೆಯಾಗಿದೆ --ಎಂದು ಹೇಳುತ್ತಾನೆ. ಹಾಗಿರುವಲ್ಲಿ ಈ ಐಶ್ವರ್ಯದಿಂದ ಸುಖಶಾಂತಿ ದೊರೆಯುವುದೆಂದು ಭಾವಿಸುವುದರಲ್ಲಿ ಅರ್ಥವೇನಿದೆ? ಹಾಗೆಯೇ ಅಧಿಕಾರ ಬಂದಲ್ಲಿ ಸುಖ ದೊರೆಯಬಹುದೇ ಎಂದರೆ ಅದೂ ಸಹ ನಮಗೆ ಕಂಡು ಬರುತ್ತಿಲ್ಲ. ಅಧಿಕಾರ ದೊರೆತಂತೆಲ್ಲ ಅಶಾಂತಿ ಹೆಚ್ಚುತ್ತದೆ. ಸಮಸ್ಯೆಗಳು ಜಾಸ್ತಿಯಾಗುತ್ತವೆ. ಈ ಮೊದಲಿಗೆ ಸಮಸ್ಯೆಗಳೇ ಇಲ್ಲದವರಿಗೆ ದಿನದಿನವೂ ಸಮಸ್ಯೆಗಳು ಹೆಚ್ಚುತ್ತವೆ. ಇಂತಲ್ಲಿ ಸುಖವೆಲ್ಲಿಯದು? ಶಾಂತಿ ಎಲ್ಲಿ? ಹಾಗಾಗಿ ಈ ಲೌಕಿಕವಾದ ಸಿರಿತನ ದೊರೆತನಗಳಿಂದ ಬರುವಂತಹ ಸುಖಶಾಂತಿಗಳೆಲ್ಲ ತತ್ಕಾಲಿಕವಾದವು, ಶಾಶ್ವತಗಳಲ್ಲ. ಮತ್ತೆ ಶಾಶ್ವತವಾದ ಸುಖವಾಗಲೀ ಶಾಂತಿಯಾಗಲೀ ಇರುವುದೆಂದರೆ--

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ
ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್
ತಮಾತ್ಮಸ್ಥಂ ಯೇs ನುಪಶ್ಯಂತಿ ಧೀರಾಃ
ತೇಷಾಂ ಶಾಂತಿಃ ಶಾಶ್ವತೀ ನೇತರೇಷಾನ್

--ಪರಮಾತ್ಮನ ಸ್ವರೂಪವನ್ನು ತಿಳಿದುಕೊಂಡಾಗಲೇ ನಮಗೆ ಶಾಶ್ವತವಾದ ಸುಖಶಾಂತಿಗಳು ದೊರೆಯುತ್ತದೆ. ಅದಿಲ್ಲದಿರುವಾಗ ಅಶಾಶ್ವತವಾದ ಸುಖಶಾಂತಿಗಳೇ ನಮಗೆ ದೊರೆಯುವುವು ಎಂದರು. ಆ ಪರಮಾತ್ಮನ ವಾಸ್ತವಿಕ ಸ್ವರೂಪವನ್ನು ತಿಳಿದುಕೊಳ್ಳಬೇಕು, ಇಲ್ಲಿಯೇ ಪ್ರಶ್ನೆಯುಂಟಾಗುತ್ತದೆ. ಪರಮಾತ್ಮನ ವಾಸ್ತವಿಕ ಸ್ವರೂಪವೆಂದರೆ ಏನು? ಮೂಲವಾಗಿ ಪರಮಾತ್ಮ ಒಬ್ಬನಿದ್ದಾನೆ ಎಂಬುದು ನಮಗೆ ತಿಳಿದಿದೆಯೋ ಇಲ್ಲವೋ? ತಿಳಿದಿದೆ. ಆ ಪರಮಾತ್ಮ ಎಲ್ಲಿದ್ದಾನೆ ಎಂಬುದು ಎರಡನೇ ಪ್ರಶ್ನೆ. ಸಾಧಾರಣವಾಗಿ ನಾವು ಏನೆನ್ನುತ್ತೇವೆ? ಪರಮಾತ್ಮ ಎಲ್ಲಿದ್ದಾನೆ -- ಗುಡಿಯಲ್ಲಿ, ಗುಡಿ ಎಲ್ಲಿದೆ? ಕ್ಷೇತ್ರದಲ್ಲಿ. ಕ್ಷೇತ್ರಗಳಾವುವು? ತಿರುಪತಿ, ಶ್ರೀಶೈಲ ಇತ್ಯಾದಿ ಕ್ಷೇತ್ರಗಳು. ಇಷ್ಟೇ ಸಾಧಾರಣವಾಗಿ ನಮಗೆ ತಿಳಿದ ವಿಷಯಗಳು. ಪರಮಾತ್ಮ ದೇಗುಲದಲ್ಲಿ, ದೇಗುಲ ಕ್ಷೇತ್ರದಲ್ಲಿ. ಈ ಎರಡೂ ಸತ್ಯವೇ. ಇಲ್ಲಿ ಅಬದ್ಧವಾದದ್ದೇನೂ ಇಲ್ಲ. ಆದರೆ ಪರಮಾತ್ಮ ಗುಡಿಯಲ್ಲಿ ಮಾತ್ರವೇ ಇದ್ದಾನೆ ಎಂಬುದು ಸರಿಯಲ್ಲ. ಆತ ಸರ್ವವ್ಯಾಪಕ. ಆತ ಇಲ್ಲದಿರುವ ಸ್ಥಳವಿಲ್ಲ.-ಇದು ಮೊತ್ತಮೊದಲನೆಯದಾಗಿ ತಿಳಿಯಬೇಕಾದ ವಿಷಯ. ಈ ಸಮಸ್ತ ಪ್ರಪಂಚವೂ ಪರಮಾತ್ಮನಿಂದ ವ್ಯಾಪ್ತವಾಗಿದೆ. ಪರಮಾತ್ಮನ ಹೊರತು ಮತ್ತೊಂದು ವಸ್ತುವೇ ಇಲ್ಲ. 'ಇಷ್ಟೊಂದು ವಸ್ತುಗಳನ್ನು ನೋಡುತ್ತಿರುವೆವಲ್ಲ ಎರಡನೆಯದು ಇಲ್ಲವೇ ಇಲ್ಲ ಎನ್ನುವಿರಲ್ಲ' ಎಂದರೆ ವಸ್ತುತಃ ಇವೆಲ್ಲ ಪರಮಾತ್ಮ ಸ್ವರೂಪಗಳೇ. 'ಅದು ಎಲ್ಲಿದ್ದರೂ ಸೂಕ್ತವೆ ಎನ್ನುತ್ತೀರಾ ಪರಮಾತ್ಮ ಸ್ವರೂಪ' ಎಂದರೆ ಹೌದು ಎನ್ನುವೆವು ನಮ್ಮ ಸಂಸ್ಕಾರದಂತೆ ನಮಗೆ ಆಶ್ಚರ್ಯವಾಗುತ್ತದೆ. ಜ್ವರ ಬಂದವನ ನಾಲಿಗೆಯೆಲ್ಲ ಕಹಿಯೇ ಆಗಿದ್ದು ಯಾವ ವಸ್ತುವನ್ನು ಬಾಯಲಿಟ್ಟುಕೊಂಡರೂ ಕಹಿಯಾಗಿಯೇ ಇರುತ್ತದೆ. ಅವನಿಗೆ ಸಕ್ಕರೆ ನೀಡಿದರೂ ಇದೇನು ಕಹಿಯಾಗಿದೆಯಲ್ಲ ಎನ್ನುವನು. ಏನಯ್ಯ ಸಕ್ಕರೆಯನ್ನು ಕಹಿ ಎನ್ನುವೆಯಲ್ಲ ಅಂದರೆ ಇನ್ನೇನೆನ್ನಬೇಕು ಎನ್ನುವನು. ಜ್ವರ ಬಂದವನ ಸಂಸ್ಕಾರ ಆ ರೀತಿಯಾದಾಯಿತು. ಜ್ವರ ಬಿಟ್ಟಿತೆಂದರೆ ಅವನ ಬಾಯಕಹಿ ಹೋದಮೇಲೆ ಅವನಿಗೆ ಸಿಹಿಯೆಂಬುದು ತಿಳಿದೀತು. ಈಗ ನಾವೆಲ್ಲ ಜ್ವರ ಬಂದವರಂತೆಯೇ ಇದ್ದೇವೆ. ಅವನ ಬಾಯ ಕಹಿಯಿಂದಾಗಿ ಸಕ್ಕರೆಯ ಸಿಹಿ ಹೇಗೆ ತಿಳಿಯದಾಯಿತೋ ಹಾಗೆಯೇ ಹಲವು ಜನ್ಮಗಳಿಂದ ಬಂದ ಈ ವಾಸನೆಯ ಕಾರಣವಾಗಿ ಭಗವಂತನ ಸರ್ವವ್ಯಾಪಕತೆಯನ್ನು ಕಾಣಲಾರದವರಾಗಿದ್ದೇವೆ. ಈ ವಾಸನೆ ಎಂತಹದು ಎಂದರೆ ಇಲ್ಲೆಲ್ಲೂ ಭಗವಂತ ಇಲ್ಲವೇ ಇಲ್ಲ ಎಂದು ನಮ್ಮಿಂದ ಹೇಳಿಸುತ್ತಿದೆ. ಈ ವಾಸನಾಜನಿತ ಅಜ್ಞಾನ ತೊಲಗಿ ಹೋದರೆ ಎಲ್ಲಿ ನೋಡಿದರಲ್ಲಿ ಭಗವದ್ದರ್ಶನ ನಮಗೆ ತಂತಾನೆ ಆಗುತ್ತದೆ. ಒಮ್ಮೆ ಭಾಗವತವನ್ನು ತೆಗೆದು ನೋಡಿರಿ. ಪ್ರಹ್ಲಾದೋಪಾಖ್ಯಾನದಲ್ಲಿ 'ಎಲ್ಲಿರುವ ಭಗವಂತ'



ತಿರುಮಲೆಗೆ ಶ್ರೀ ವೆಂಕಟೇಶ್ವರಸ್ವಾಮಿ ದರ್ಶನಾರ್ಥ ಆಗಮಿಸಿದ ಶೃಂಗೇರಿಯ ಶ್ರೀ ಶಾರದಾಪೀಠದ ಶ್ರೀ ಶ್ರೀ ಭಾರತೀತೀರ್ಥ ಸ್ವಾಮಿಜೀ ಅವರು ದಿನಾಂಕ 26-1-93 ರಂದು ತಿರುಮಲೆಯ ಆಸ್ಥಾನ ಮಂಟಪದಲ್ಲಿ ಭಕ್ತರನ್ನು ಅನುಗ್ರಹಿಸಿ ಆಶೀರ್ವಚನ ನೀಡಿದರು. ಅದರ ಸಾರ ಸಂಗ್ರಹವನ್ನಿಲ್ಲಿ ಸಪ್ತಗಿರಿ ವಾಚಕರಿಗಾಗಿ ಸಾದರಪಡಿಸಲಾಗಿದೆ. --ಸಂ||

ಎಂದು ಕೇಳಿದರೆ ಆತ 'ಎಲ್ಲಿ ಭಗವಂತ ಇಲ್ಲವೆನ್ನು ವಿರಿ ನೀವು' ಎಂದು ಪ್ರಶ್ನಿಸುತ್ತಾನೆ. 'ಇಲ್ಲಹನು ಅಲ್ಲಿ ಲ್ಲವೆಂಬ ಸಂದೇಗವು ಸಲ್ಲದ್ಯೆ. ಸುದರ್ಶನನು ಸರ್ವೋ ಪಗತನಹನು' ಎನ್ನುತ್ತಾನೆ. ಹೀಗೆಂದಾಗ ಆ ಪ್ರಹ್ಲಾ ದನ ಸಂಸ್ಕಾರ ಎಷ್ಟು ಉತ್ಕೃಷ್ಟವಾದ ಸಂಸ್ಕಾರವಾಗಿ ರಬೇಕು. ಆ ಸಂಸ್ಕಾರೌನ್ನತ್ಯ ನಮಗಿಲ್ಲವಾಗಿ ಸರ್ವತ್ರ ಭಗವದ್ದರ್ಶನವಾಗದೆ ಹೋಗುತ್ತಿದೆ. ಅಸಲು ಭಗ ವಂತನನ್ನು ಹುಡುಕಲು ಹೊರಗೆ ಅಲೆಯದೇಕಾ ಗಿಲ್ಲ ನಿಮ್ಮಲ್ಲಿಯೇ ಇದ್ದಾನೆ.

ಭಗವದ್ಗೀತೆಯೆಂದರೆ ನಮಗೆಲ್ಲ ಅಪಾರವಾದ ಗೌರವ. ಅಲ್ಲಿನ ಅಕ್ಷರಕ್ಷರವೂ ವೇದ ಸಮಾನವೆಂಬ ಸಿದ್ಧಾಂತ. ಅಲ್ಲಿ ಭಗವಂತ ಹೇಳುತ್ತಾನೆ--

ಈಶ್ವರಃ ಸರ್ವಭೂತಾನಾಂ
ಹೃದ್ದೇಶೇಽರ್ಜುನ ತಿಷ್ಠತಿ

ಭಗವಂತನನ್ನು ಹೊರಗೆಲ್ಲೂ ಹುಡುಕಿಕೊಂಡು ಹೋಗಬೇಕಿಲ್ಲ. ನಿಮ್ಮ ಹೃದಯದಲ್ಲಿಯೇ ಕುಳಿ ತಿದ್ದಾನೆ. ಎಂತಲೇ ನಾನು ಈಗಾಗಲೇ ಹೇಳಿದ ಮಾತು. --ತಮ ಆತ್ಮಸ್ಥು ಅನುಪಶ್ಯಂತಿ ಧೀರಾಃ ಆತ್ಮಸ್ಥವೆಂದರೆ ಹೃದಯಸ್ಥಂ. ನಿಮ್ಮ ಹೃದಯದ ಲ್ಲಿಯೇ ಇರುವ ಪರಮಾತ್ಮನನ್ನು ನೀವು ಕಂಡಾಗ ನಿಮಗೆ ಶಾಶ್ವತವಾದ ಶಾಂತಿಯೆಂದರು. ಇನ್ನು ಆತ ನನ್ನು ನೋಡಿದ ಮೇಲೆ ಶಾಶ್ವತ ಶಾಂತಿ ಎಂದರೇನು ಎನ್ನುತ್ತಾರೆ ಸಾಮಾನ್ಯಜನ. ಅವನನ್ನು ನೋಡು ವುದು ಸಾಧ್ಯವೇ ಎನ್ನುತ್ತಾರೆ. ಆಕಾರವಿದ್ದವನನ್ನು ನೋಡುವುದು ಈ ನಮಗಿರುವ ಹೊರಗಣ ಕಣ್ಣು. ಆಕಾರವಿಲ್ಲದವನನ್ನು ನೋಡಲು ಬೇರೆ ಬಗೆಯ ಕಣ್ಣು. ಏನು ಕಣ್ಣುಗಳಲ್ಲಿ ಎರಡು ವಿಧವೇ ಎಂದರೆ ಗೀತೆಯಲ್ಲಿ ಭಗವಂತ ಹೇಳುತ್ತಾನೆ,

ನ ತು ಮಾಂ ಶಕ್ಯಸೇ ದ್ರಷ್ಟುಂ
ಅನೇನೈವ ಸ್ವಚಕ್ಷುಷ
ದಿವ್ಯಂ ಚ ದಾಮಿತೇ ಚಕ್ಷುಃ
ಪಶ್ಯ ಮೇ ಯೋಗ ಮೈಶ್ವರಮ್

--'ನೀನು ನನ್ನ ನಿರೂಪವನ್ನು ನೋಡಬೇಕೆಂದು ಬಯಸಿರುವೆ. ಆದರೆ ನಿನ್ನ ಈ ಚರ್ಮ ಚಕ್ಷುಗಳಿಂದ ನೋಡಲಾರೆ. ಅದಕ್ಕೆ ಬೇರೆಯೇ ಆದ ಚಕ್ಷುಗಳ ಅಗತ್ಯವಿದೆ. ಅವುಗಳನ್ನು -- ಆ ದಿವ್ಯ ನಯನವನ್ನು ನಾನು ನೀಡುವೆ. ಅವುಗಳ ಮೂಲಕ ನೀನು ನೋಡ ಬಹುದು.' ದಿವ್ಯ ಚಕ್ಷುವೆಂದರೆ ಬೇರೆ ಕನ್ನಡಕವೊ ಅಥವಾ ಕೃತಕವಾದ ಕಣ್ಣೋ ಎಂದರೆ ಎರಡೂ ಅಲ್ಲ. ಅದಕ್ಕಾಗಿ ಅಂತರಂಗದ ಒಂದು ಬೆಳಕನ್ನು ಪ್ರಸಾದಿಸಿದ ಭಗವಂತ. ನಾವು ಬಾಹ್ಯ ನಯನಗ ಳಿಂದ ಈ ವಸ್ತುಗಳನ್ನು ಕಾಣುತ್ತೇವೆ. ಕಣ್ಣು ಮುಚ್ಚಿ ದರೆ ಒಂದು ಬೇರೆ ದೃಶ್ಯ ಕಂಡುಬರುತ್ತದೆ. ಒಬ್ಬಾತ ಹೇಳಿದ -- "ಸ್ವಾಮಿ ನನಗೆ ಕಣ್ಣು ಮುಚ್ಚಿದರೆ ಕತ್ತಲೆ ಮಾತ್ರ ಕಾಣುತ್ತದೆ. ನೀವು ಏನೇನೋ ಹೇಳುತ್ತಿ ದ್ದೀರಿ." ಹೌದು ಅಭ್ಯಾಸವಿಲ್ಲದವನಿಗೆ ರೆಪ್ಪೆ ಮುಚ್ಚಿ ದರೆ ಕತ್ತಲೆ ಮಾತ್ರ ಕಾಣುತ್ತದೆ. ಅಭ್ಯಾಸ ಮಾಡಿದ ವನು ರೆಪ್ಪೆ ಮುಚ್ಚಿದರೆ ಭಗವಂತನ ಸುಂದರಾಕೃತಿ ಕಂಡುಬರುತ್ತದೆ. ರೆಪ್ಪ ತೆಗೆದರೆ ಭಗವಂತನ ಹತ್ತು ಹನ್ನೆರಡು ಅಡಿ ಆಕೃತಿ ಕಾಣಬಹುದು. ರೆಪ್ಪೆ ಮುಚ್ಚಿ ದರೆ ಆ ಧ್ಯಾನಾಭ್ಯಾಸ ಮಾಡಿದವನಿಗೆ ಭಗವಂತನ ವಿಶ್ವರೂಪ ಕಂಡುಬರುತ್ತದೆ. ಈ ವಿಶ್ವರೂಪವನ್ನು ಬಾಹ್ಯಚಕ್ಷುವಿನಿಂದ ಕಾಣಲಾರೆವು. ಕಣ್ಣು ಮುಚ್ಚಿ ಕೊಂಡರೆ ಮಾತ್ರ ನೋಡಬಹುದು. ಏಕೆ ಹೇಳುತ್ತಿ ದ್ದೇನೆ ಎಂದರೆ ಹೃದಯಾಂತರಾಳದಲ್ಲಿರುವ ಆತ ನನ್ನು ಕಾಣುವುದು ಹೇಗೆ ಎಂದರೆ ದಿವ್ಯ ಚಕ್ಷುಗ ಳಿಂದ ನಾವು ನೋಡಬಹುದು. ದಿವ್ಯಚಕ್ಷು ಎಂದರೆ ನಮ್ಮ ಅಂತರ್ದೃಷ್ಟಿ. ಈ ಅಂತರ್ದೃಷ್ಟಿ ನಮಗೆ ಬರ ಬೇಕೆಂದರೆ ಭಗವಂತನ ಕೃಪೆ ಬೇಕು. ನಾವೇನೊ ಮೇಲು ಮೇಲೆ ಪೂಜೆ ಮಾಡಿದೆವು ಜಪ ಮಾಡಿ ದೆವು ಎಂದರೆ ಅವೆಲ್ಲ ಮೇಲು ಮೇಲಕ್ಕೆ ಸರಿಹೋ ಗುತ್ತವೆ. ಮನಸ್ಸು ತತ್ಪರವಾಗದೆ ಮಾಡಿದ ಪೂಜೆ ಜಪ ತಪ ಧ್ಯಾನಗಳಿಂದ ನಮಗೆ ಆ ಸ್ಥಿತಿಯುಂ ಟಾಗದು. ಎಂದರೆ ಇವುಗಳಿಂದ ಹೃದಯದಲ್ಲಿ ರುವ ಭಗವಂತನ ದರ್ಶನ ಮಾಡುವಂತಹ ಸ್ಥಿತಿ ಯನ್ನು ನಾವು ಮುಟ್ಟಲಾಗದು. ಆ ಭಗವಂತನಲ್ಲಿ ಮನಸ್ಸು ಲೀನವಾಗುವಂತೆ ಅಭ್ಯಾಸ ಮಾಡಿಕೊಂ ಡಲ್ಲಿ ನಮಗೆ ಆ ಸ್ಥಿತಿ ಉಂಟಾಗುವುದು. ಮನಸ್ಸು ತಲ್ಲೀನವಾಗುವುದೆಂದರೇನು? ಪೂಜೆ ಮಾಡು ವಾಗ ಮತ್ತೊಂದು ವಿಷಯ ಮನಸ್ಸಿನಲ್ಲಿ ಸುಳಿ ಯದ ಹಾಗೆ ಪೂಜಿಸುವುದೇ ತಲ್ಲೀನವಾಗುವಿಕೆ. ನಾವು ಪೂಜೆ, ಧ್ಯಾನ, ಜಪಗಳಲ್ಲಿ ಕುಳಿತಿದ್ದರೆ ಇತ ರರಿಗೆ ನಾವು ಆ ಕೆಲಸ ಮಾಡುತ್ತಿರುವಂತೆ ಕಂಡು ಬಂದರೂ, ನಾವು ನಮ್ಮ ಮನಸ್ಸು ಮಾತ್ರ ಅದರಲ್ಲಿ ರದು, ಮನದಲ್ಲಿ ಯಾವು ಯಾವುದೋ ಆಲೋಚ ನೆಗಳು ತಿರುಗುತ್ತಿರುತ್ತವೆ. ಅದನ್ನೇ ಅರ್ಜುನ ಕೃಷ್ಣ ನಲ್ಲಿ ಕೇಳಿದ "ಸ್ವಾಮಿ ನೀವು ಹೇಳಿದ ಯೋಗ ಚೆನ್ನಾ ಗಿಯೇ ಇದೆ, ಆದರೆ ಇದು ಯಾರಿಗಾದರೂ ಸಾಧ್ಯ ವೆನ್ನಬಹುದೇ?"--

ಚಂಚಲಂ ಹಿ ಮನಃ ಕೃಷ್ಣ
ಪ್ರಮಾಥೀ ಬಲವದ್ದೃಢಂ
ತಸ್ಯಾಹಂ ನಿಗ್ರಹಂ ಮನ್ಯೇ
ವಾಯೋರಿವ ಸುದುಷ್ಕರಮ್

ನೀವು ಇಷ್ಟು ಹೇಳಿದಿರಿ, ಮನವಾದರೋ ಗಾಳಿ ಗಿಂತ ವೇಗವಾಗಿ ಓಡುತ್ತಿದೆ. ಇಲ್ಲಿ ಸ್ವಾಮಿ ಗಳು ಉಪನ್ಯಾಸ ಮಾಡುತ್ತಿದ್ದಾರೆ. ಇಲ್ಲಿ ನಮ್ಮ ಶರೀರವೇನೋ ಕುಳಿತೇ ಇದೆ. ಆದರೆ ಒಬ್ಬೊ ಬ್ಬರೂ ಏನೇನು ಆಲೋಚನೆಯಲ್ಲಿದ್ದಾರೊ ಅವರ ವರ ಅಂತಃಕರಣಕ್ಕೇ ತಿಳಿದಿದೆ. ಒಬ್ಬರಿಗೆ ಅಮೆರಿ ಕಾದಲ್ಲಿರುವ ಮಗನ ಕ್ಷೇಮದಚಿಂತೆ, ಇನ್ನೊಬ್ಬರಿಗೆ ತಮ್ಮವ ನಿನ್ನೆ ರಷ್ಯಾಗೆ ಹೋಗುವೆನೆಂದಿದ್ದ ಅವನು ಸರಿಯಾಗಿ ಹೋಗಿ ಸೇರಿದನೊ ಇಲ್ಲವೊ ಎಂಬ ಚಿಂತೆ. ಹೀಗೆ ಮನಸ್ಸು ವೇಗವಾಗಿ ಓಡುತ್ತಿದೆ. ಅದನ್ನು ಒಂದೆಡೆ ನಿಲ್ಲಿಸುವಿಕೆ ಎಂಬುದು ಆಗುವ ಕೆಲಸವೇ? ತಸ್ಯಾಹಂ ನಿಗ್ರಹಮನ್ಯೇ ವಾಯೋರಿವ ಸುದುಷ್ಕರಂ --ಹೇಗೆ ಅತಿವೇಗವಾಗಿ ಚಲಿಸುವ ಗಾಳಿಯನ್ನು ಹಿಡಿಯುವುದು ಅಸಾಧ್ಯವೊ ಹಾಗೆ ಈ ಮನಸ್ಸಿನ ಕಥೆಯೂ ಅಷ್ಟೆ. ನೀವು ಹೇಳುವ ಯೋಗ ವನ್ನು ನೆನೆದರೆ ನಮ್ಮ ಸಾಮರ್ಥ್ಯಕ್ಕೆ ಮೀರಿದ್ದು ಎನ್ನಿ ಸುತ್ತದೆ ಎಂದರೆ, ಭಗವಂತ ಹೇಳಿದ--ಮಗು ನೀನು ಹೇಳಿದ್ದು ಸರಿಯೇ. ಆದರೆ ಮನವನ್ನು ವಶಪಡಿ ಸಿಕೊಳ್ಳುವುದು ಅಸಾಧ್ಯವೆನ್ನುವುದನ್ನು ಮಾತ್ರ ಒಪ್ಪ ಲಾಗದು.

ಅಸಂಶಯಂ ಮಹಾಬಾಹೋ
ಮನೋ ದುರ್ನಿಗ್ರಹಂ ಚಲಮ್
ಅಭ್ಯಾಸೇನ ತು ಕೌಂತೇಯ
ವೈರಾಗ್ಯೇಣ ಚ ಗೃಹ್ಯತೇ

--ಮನವನ್ನು ನಿಗ್ರಹಿಸುವುದು ಹೇಗೆ ಎಂದರೆ ಅದಕ್ಕೆ ಎರಡು ಉಪಾಯಗಳುಂಟು. ಅಭ್ಯಾಸ, ವೈರಾಗ್ಯ. ಇವೆರಡರಿಂದ ಮನವೆಂಬ ಕುದುರೆ ಯನ್ನು ಬಿಗಿಹಿಡಿಯಬಹುದು. ಅಭ್ಯಾಸ ವೈರಾ ಗ್ಯಗಳೆಂದರೆ ಏನು? ಪ್ರತಿ ದಿನವೂ ಭಗವದ್ವಿ ಗ್ರಹದ ಮುಂದೆ ಕುಳಿತು ಸುಮ್ಮನೆ ನೋಡು ವಿಕೆ -- ಅದು ಅಭ್ಯಾಸ. ಸುಮ್ಮನೆ ನೋಡುತ್ತಿರು ವಾಗ ಒಂದು ಹತ್ತು ಸೆಕೆಂಡ್‌ಗಳ ಕಾಲವಾದರೂ ಮನಸ್ಸು ಅಲ್ಲಿಯೇ ಕೇಂದ್ರೀಕೃತವಾಗುತ್ತದೆ. ಹೀಗೆ ದಿನವೂ ಮಾಡುತ್ತಿದ್ದಲ್ಲಿ-- ಆ ಸಮಯವನ್ನು ಹೆಚ್ಚಿ ಸಿಕೊಂಡು ಹೋದಲ್ಲಿ ಒಂದು ಅಭ್ಯಾಸವೇರ್ಪಡು ತ್ತದೆ. ಹೀಗೆ ನೋಡುವುದು ನಿಯಮವಾದಂತೆಲ್ಲ ನಾವು ಕಣ್ಣು ಮುಚ್ಚಿದರೂ ಆ ಚಿತ್ರವೇ ಕಂಡು ಬರುತ್ತದೆ. ಇದೇ ಅಭ್ಯಾಸ. ವೈರಾಗ್ಯವೆಂದರೆ, ಈ ಲೋಕದಲ್ಲಿ ನಾನು ಯಾವ ಯಾವ ವಸ್ತುಗ ಳನ್ನು ಬಯಸುತ್ತಿರುವೆನೊ ಅವುಗಳಿಂದ ನಿಜವಾಗಿ ನನಗೆ ಸುಖ ಎಂಬುದುಂಟಾಗದು. ಆದ್ದರಿಂದ ಇವುಗಳ ಬಗ್ಗೆ ನಾನು ಚಿಂತಿಸಕೂಡದು, ಎಂಬ ದೃಢವಾದ ಭಾವನೆ. ಯಾವುದರಬಗ್ಗೆ ಚಿಂತಿಸುತ್ತಿ ರುವೆನೊ, ಭಾವಿಸುತ್ತಿರುವೆನೊ ಅದರಿಂದ ನನಗೆ

ಸೂಕ್ತವಾದ ಸತ್ಯವಾದ ಸುಖವಿಲ್ಲ. ಎಲ್ಲಿಯವರೆಗೆ ಸುಖಕ್ಕೆ ಜೋತು ಬೀಳುವೆವೋ ಅಲ್ಲಿಯವರೆಗೆ ಅದನ್ನು ಪಡೆಯುವುದು ಸಾಧ್ಯವಿಲ್ಲ. ಹಾಗಾಗಿ ನಮ್ಮ ಸಮಯವನ್ನೇಕೆ ವ್ಯರ್ಥ ಕಳೆಯಬೇಕು? ಅದರಿಂದ ಈ ವಿಷಯಗಳಿಂದ ದೂರವಾಗಿ, ಆ ಪರಮಾತ್ಮ ಧ್ಯಾನದಲ್ಲಿ ಸ್ವಲ್ಪ ಹೊತ್ತು ಕಳೆಯುವ ಎನ್ನುವುದೇ ವೈರಾಗ್ಯ ಭಾವನೆ. ಯೋಗ ಶಾಸ್ತ್ರದಲ್ಲೂ ಇದೇ ಮಾತನ್ನು ಹೇಳಿದರು. ಅಭ್ಯಾಸ ವೈರಾಗ್ಯಾಭ್ಯಾಂ ತನ್ನಿರೋಧಃ. ಕೃಷ್ಣ ಪರಮಾತ್ಮನನ್ನು ಯೋಗೇಶ್ವರನೆಂದು ಕರೆಯುತ್ತಾರೆ ಯೋಗದ ಒಡೆಯನಾದ್ದರಿಂದ ಆತ ನಮಗೆ ಯೋಗೋಪಾಯವನ್ನು ಸೂಚಿಸಿದ. ಇನ್ನೊಂದು ಪ್ರಶ್ನೆಯುಂಟಾಗುತ್ತದೆ. ಹೃದಯದಲ್ಲಿ ಭಗವಂತನಿದ್ದಾನೆಂದರೆ ಆತ ಬಹಳ ಕಿರಿಯವನೇ, ದೊಡ್ಡವನೇ? ಭಗವಂತ ಸರ್ವವ್ಯಾಪಿ ಎನ್ನುವರಲ್ಲ, ಹೃದಯವೆಂದರೆ ಹಿಡಿಯಷ್ಟೇ ಅಲ್ಲವೇ? ಅಲ್ಲಿ ಹೇಗೆ ಕುಳಿತುಕೊಳ್ಳುವನೆಂಬುದು? ಸರ್ವವ್ಯಾಪಿಯಾದ ಭಗವಂತ ಇಲ್ಲೂ ಕುಳಿತಿರಬಹುದು ಅಲ್ಲೂ ಕುಳಿತಿರಬಹುದು. ಆದ್ದರಿಂದ ಭಗವಂತ ಹೃದಯದಲ್ಲಿ ಇದ್ದಾನೆ ಎನ್ನಲು ಯಾವುದೇ ಸಂದೇಹಕ್ಕೂ ಅವಕಾಶವಿಲ್ಲ. ಏಕೆಂದರೆ ಭಾಗವತವನ್ನು ಗಮನಿಸಿದಲ್ಲಿ ಶ್ರೀಕೃಷ್ಣ ಗೋಪಬಾಲಕರೊಂದಿಗೆ ಗೋವುಗಳ ಕಾಯಲು ಹೋದಾಗ ಒಮ್ಮೆ ಅವರೆಲ್ಲರನ್ನೂ ಬ್ರಹ್ಮ ಮಾಯಗೊಳಿಸಿದ. ಗೋಪಾಲಕರನ್ನೂ ಗೋವುಗಳನ್ನೂ ಬ್ರಹ್ಮಮಾಯಗೊಳಿಸಿದಾಗ ಶ್ರೀಕೃಷ್ಣನೇ ಗೋಪಾಲಕರಾಗಿಯೂ ಗೋವುಗಳಾಗಿಯೂ ತೋರಿಬರುತ್ತಿದ್ದಾನೆ. ವ್ಯವಹಾರ ಸಲೀಸಾಗಿ ನಡೆದುಹೋಗುತ್ತಿದೆ. ಆ ಬ್ರಹ್ಮನಿಗೆ ಮಾತ್ರ ಆಶ್ಚರ್ಯವಾಗುತ್ತಿದೆ. ಇದೇ ಭಗವಂತನ ಸರ್ವವ್ಯಾಪಕತೆ. ಹಾಗಾಗಿ ಸರ್ವವ್ಯಾಪಿಯಾದ ಭಗವಂತ ಹೃದಯದಲ್ಲೂ ಇರುವನು ಎಂದಮೇಲೆ ಆ ಹೃದಯದೊಳಗಿನ ಭಗವಂತನನ್ನು ನೋಡಬಲ್ಲ ಶಕ್ತಿ ನಮಗೆ ಬಂದ ನಂತರ ಬೇರೆಯವುಗಳಲ್ಲಿ ರುಚಿಯಿರದು. ಆ ಪರಮಾತ್ಮನಲ್ಲಿ ಲೀನವಾದ ಮನಸ್ಸಿಗೆ ಬೇರಾವುದರಲ್ಲೂ ಆಸಕ್ತಿಯಿರದು ಕಾರಣ ಅವನು ಕೃತಕೃತ್ಯನಾಗಿ ಕೃತಾರ್ಥನಾಗಿ ಬಿಡುತ್ತಾನೆ. ಕೃತಾರ್ಥನಾದವನಿಗೆ ಏನಾಗಬೇಕಿದೆ ಏನು ಪಡೆಯಬೇಕಿದೆ. ಎಲ್ಲಿಯವರೆಗೆ ಭಗವಂತನನ್ನು ಕಾಣಲಾರೆವೊ ಅಲ್ಲಿಯವರೆಗೆ ಅದನ್ನು ಮಾಡಬೇಕು ಇದು ಮಾಡಬೇಕು ಎಂಬ ತಾಪತ್ರಯ. ಭಗವಂತನನ್ನು ಯಾವಾಗ ನೋಡುವೆವೊ ಆ ನಂತರದಲ್ಲಿ ಯಾವ ತಾರತಮ್ಯವೂ ಇರದು. ಜನ್ಮದಲ್ಲಿ ನಾವು ಪಡೆಯಬೇಕಾದದ್ದು ಮತ್ತೇನೂ ಇಲ್ಲ ಎಂಬ ಒಂದು ತೃಪ್ತಿ ಉಂಟಾದ ನಂತರ ನಮಗೆ ಯಾವುದೂ ಅಗತ್ಯವಿರದು. ಈ ನಿತ್ಯಸುಖಕ್ಕೆ ಶಾಂತಿಗೆ ಸಾಧನ ಪರಮಾತ್ಮದರ್ಶನವೇ. ಅದಕ್ಕಾಗಿ ನಾವು ಪ್ರಯತ್ನಿಸಬೇಕು. ನಮ್ಮ ಪ್ರಯತ್ನ ಯಾವ ಯಾವ ದಿಕ್ಕಿನಲ್ಲೋ ಹರಿಯುತ್ತಿದೆ. ಆದರೆ ಅವುಗಳನ್ನು ನಮ್ಮ ಹೃದಯದಲ್ಲಿಯೇ ಇರುವ ಭಗವಂತನನ್ನು ದರ್ಶಿಸುವಲ್ಲಿ ಹರಿಯಬಿಟ್ಟರೆ ಅದರಿಂದ ಜನ್ಮ ಸಾರ್ಥಕವಾಗಲು ಅವಕಾಶವಿದೆ. ಹಿರಿಯರು ಹೇಳುತ್ತಾರೆ. ಮನಸ್ಸಿನಲ್ಲಿ ಎಲ್ಲಿಯವರೆಗೆ ಕಲ್ಮಷಗಳಿರುವವೊ ಅಲ್ಲಿಯವರೆಗೆ ಭಗವಂತನನ್ನು ಕಾಣುವ ಸಂಸ್ಕಾರ ವುಂಟಾಗದು. ಆದಿ ಶಂಕರಾಚಾರ್ಯರೆಂದರು -- ನೀನು ನಿನ್ನ ಮನದ ಕಲ್ಮಷಗಳಾದ ಕಾಮಕ್ರೋಧಗಳಿಂದ ದೂರನಾಗಿ ಮನಃಶುದ್ಧನಾದರೆ ನಿನ್ನ ಹೃದಯದಲ್ಲೇ ಇರುವ ಭಗವಂತನನ್ನು ದರ್ಶಿಸಬಲ್ಲೆ.

ಗುರುಚರಣಾಂಬುಜ ನಿರ್ಭರ ಭಕ್ತಃ
ಸಂಸಾರಾದಚಿರಾದ್ಭವ ಮುಕ್ತಃ
ಸೇಂದ್ರಿಯ ಮಾನಸ ನಿಯಮಾದೇವಂ
ದ್ರಕ್ಷ್ಯಸಿ ನಿಜ ಹೃದಯಸ್ಥಂ ಮುಕ್ತಃ

--ಇಂದ್ರಿಯಗಳನ್ನೂ ಮನವನ್ನೂ ವಶಪಡಿಸಿಕೊಂಡಲ್ಲಿ ಮಾತ್ರವೇ ಹೃದಯದಲ್ಲಿರುವ ದೇವರನ್ನು ದರ್ಶಿಸಬಹುದು. ಅದೆಂತು ಸಾಧ್ಯವೆಂದರೆ -- ಕಾಮಂ, ಕ್ರೋಧಂ, ಲೋಭಂ, ಮೋಹಂ, ತ್ಯಕ್ತ್ವಾತ್ಮಾನಂ, ಭಾವಯ ಕೋಹಂ --ಈ ಕಾಮ ಕ್ರೋಧ ಲೋಭ ಮೋಹಗಳನ್ನು ವರ್ಜಿಸಿ, ಆತ್ಮತತ್ವವನ್ನು ತಿಳಿದುಕೊಳ್ಳಲು ಪ್ರಯತ್ನ ಪಡು ಎಂದರು. ಎಲ್ಲಿಯವರೆಗೆ ಈ ಕಾಮ ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ಮನದಲ್ಲಿ ಮನೆಮಾಡಿರುವವೊ ಅಲ್ಲಿಯವರೆಗೆ ನಮಗೆ ಸನ್ಮಾರ್ಗದಲ್ಲಿ ನಡೆಯುವ ಬುದ್ಧಿಯೇ ಬರುವುದಿಲ್ಲ. ಇಡೀ ಹೊತ್ತೆಲ್ಲ ಯಾವುದೂ ಪ್ರಾಪಂಚಿಕವಾದ ವಿಷಯದಲ್ಲಿ ಸಿಲುಕಿ ದೈವೀ ಸಂಪತ್ತನ್ನು ಹೊಂದಲು ತುಸುವೂ ಪ್ರಯತ್ನಿಸದೆ ಯಾವುದೊ ಒಂದು ವಿಧದಲ್ಲಿ ಜೀವನ ನಡೆಸುವುದು ಆಗುವುದೇ ವಿನಃ ಜೀವನ ಹೇಗೆ ಸಾರ್ಥಕವಾಗುತ್ತದೆ ಎಂಬ ಪ್ರಶ್ನೆಯೇ ಬರದು. ಆದ್ದರಿಂದ ಲಕ್ಷ್ಯ ಸಾಧನೆಯ ಬಯಕೆಯಿರುವ ಮನುಷ್ಯನಿಗೆ ಈ ಕಾಮ ಕ್ರೋಧ ನಿಗ್ರಹವೆನ್ನುವುದು ಪ್ರಥಮ ಸೋಪಾನವೆಂದರು. ಮೊದಲ ಮೆಟ್ಟಿಲನ್ನೇ ಏರದವನು ಮಹಡಿಯನ್ನು ಹೇಗೆ ತಾನೇ ಏರಬಲ್ಲ? ಮೊದಲ ಮೆಟ್ಟಿಲೆಂದರೆ ಈ ಅಂತಃಶತ್ರುವನ್ನು ನಿಗ್ರಹಿಸುವುದು. ನಮಗೆ ಎರಡು ವಿಧವಾದ ಶತ್ರುಗಳು. ಬಾಹ್ಯಶತ್ರುಗಳು ಹಾಗೂ ಅಂತಃಶತ್ರುಗಳು. ಬಾಹ್ಯಶತ್ರುಗಳನ್ನು ನಿಗ್ರಹಿಸುವುದು ಸುಲಭ. ಏಕೆಂದರೆ ಅವರು ಏನು ಮಾಡುತ್ತಾರೆ ಎಂಬುದು ನಮಗೆ ತಿಳಿಯುತ್ತದೆ. ಅಂತಃಶತ್ರುಗಳು ನಮ್ಮ ಒಳಗೇ ಕುಳಿತು ನಮಗೆ ದ್ರೋಹ ಮಾಡುತ್ತಿರುತ್ತಾರೆ. ನಮ್ಮ ಮನೆಗೆ ಬಂದು ನಮ್ಮ ಮನೆಯನ್ನು ನೆಲಸಮ ಮಾಡಲು ಯೋಚಿಸುವವನು ಅತ್ಯಂತ ದ್ರೋಹಿ. ಹೊರಗಿನಿಂದ ಮನೆಯನ್ನು ಮುರಿಯುವವನನ್ನು ಬಹಳ ಸುಲಭವಾಗಿ ನಿಗ್ರಹಿಸಬಹುದು. ಅದೇ ರೀತಿಯಾಗಿ ಈ ಅಂತಃಶತ್ರುಗಳಾದ ಕಾಮ, ಕ್ರೋಧ, ಲೋಭ, ಮೋಹಗಳು ನಮ್ಮಿಂದ ತಪ್ಪುಗಳನ್ನು ಮಾಡಿಸುತ್ತಲೇ ಇರುತ್ತವೆ.

ಲೋಕದಲ್ಲಿ ಯಾವನೇ ಮನುಷ್ಯನಾದರೂ ತಪ್ಪು ಮಾಡಿದನೆಂದರೆ ಈ ವೈರಿಗಳಲ್ಲಿ ಯಾವುದೊ ಒಂದಕ್ಕೆ ವಶನಾಗಿ ತಪ್ಪು ಮಾಡುತ್ತಿದ್ದಾನೆ ಎಂದರ್ಥ. ಆಸೆ, ಕೋಪಗಳೆರಡೂ ಇಲ್ಲದವನ್ನು ತಪ್ಪುಗಳನ್ನು ಮಾಡಲು ಅವಕಾಶವಿರದು. ಒಂದು ಬೆಟ್ಟದ ಮೇಲೆ ಎಷ್ಟೇ ಮಳೆ ಸುರಿದರೂ ಆ ಬೆಟ್ಟ ಮೆದುವಾಗದು. ಸೂಕ್ತವಾಗಿ ಉತ್ತ ಭೂಮಿಯ ಮೇಲೆ ಮಳೆ ಸುರಿದರೆ ಆ ಭೂಮಿ ಮೆತ್ತಗಾಗುತ್ತದೆ. ಇದೇ ನಮಗೆ ತೋರಿಬರುವ ದೃಷ್ಟಾಂತ. ಯಾರ ಮನವು ಕಾಮಕ್ರೋಧಗಳಿಂದ ತುಂಬಿರುವುದೋ ಆತನು ಕೇಳುವ ವೇದಾಂತವೆಲ್ಲ ಗೋರ್ಕಲ್ಲ ಮೇಲೆ ಮಳೆ ಸುರಿದಂತೆ. ಮನಸ್ಸು ಪರಿಶುದ್ಧವಾಗಲು ಬೇಕಾದ್ದು ಭಗವಂತನ ಕೃಪೆ. ಎಂತಲೇ ಪ್ರಾರ್ಥಿಸಬೇಕು -- "ನನ್ನ ಮನದ ಕಲುಷವನ್ನು ಕಳೆದು ಪರಿಶುದ್ಧಗೊಳಿಸು, ನನ್ನನ್ನು ಸಂಸಾರ ಸಮುದ್ರದಿಂದ ದಾಟಿಸು" ಇಲ್ಲಿ ಹಲವರು ಪ್ರಶ್ನಿಸಬಹುದು. 'ಅಯ್ಯಾ ಯಾವ ವಿಧವಾದ ಆಸೆಗಳೂ ಇರಬಾರದು ಎಂದಿರಿ. ಭಗವಂತನನ್ನು ಹೀಗೆ ಪ್ರಾರ್ಥಿಸುವುದೇ ಆಸೆಯಲ್ಲವೇ? ಹೇಳುತ್ತಾರೆ ಹಿರಿಯರು-- ಧರ್ಮಾವಿರುದ್ಧ ಭೂತೇಷು ಕಾಮೋಸ್ಮಿ ಭರತರ್ಷಭ. ಆಸೆ ಇರುವಂತಹದ್ದೇ. ಯಾವುದರಿಂದ ಹಾನಿಯಾಗದೊ ಅಂತಹ ಆಸೆ ಇರಲಿ ಎಂದರು. ನಾವು ದಿನಂಪ್ರತಿ ಐದು ನಿಮಿಷವಾದರೂ ಭಗವಂತನನ್ನು ಧ್ಯಾನಿಸುವುದು ಅತ್ಯವಶ್ಯಕ. ಅದೇ ರೀತಿಯಲ್ಲಿ ಅನುಷ್ಠಿಸಬೇಕು. ಮೊದಲು ಐದು ನಿಮಿಷದಿಂದಾರಂಭಿಸಿದರೆ ಅದನ್ನು ನಿಧಾನವಾಗಿ ಹೆಚ್ಚಿಸಬಹುದು.

ಈ ಕ್ಷೇತ್ರವನ್ನು ಶ್ರೀ ಶಂಕರಾಚಾರ್ಯರೇ ದರ್ಶಿಸಿ, ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಸೇವಿಸಿ ನಮ್ಮೆಲ್ಲರಿಗೂ ಮಾರ್ಗದರ್ಶನ ಮಾಡಿದ್ದಾರೆ. ಅವರು ತೋರಿದ ಮಾರ್ಗ ನಮಗೆ ಶಿರೋಧಾರ್ಯ. ಅದೇ ರೀತಿಯಲ್ಲಿ ನಮ್ಮ ಗುರುಗಳು ಜಗದ್ವಂದ್ಯರಾದ ಶ್ರೀ ವಿದ್ಯಾಮಹಾತೀರ್ಥಸ್ವಾಮಿಗಳು ಈ ಕ್ಷೇತ್ರಕ್ಕೆ ಅನೇಕ ಬಾರಿ ಬಂದಿದ್ದರು. ಅವರ ಸಂಕಲ್ಪಬಲದಿಂದ ಶಾರದಾ ವಿದ್ಯಾಪೀಠವನ್ನೇರಿದ ನಂತರ ನಾವು ಮೊದಲಬಾರಿಗೆ ಈ ಕ್ಷೇತ್ರಕ್ಕೆ ಬಂದು ಸ್ವಾಮಿಯನ್ನು ದರ್ಶಿಸಿ ತಮ್ಮನ್ನೆಲ್ಲ ನೋಡಿ ಆಶೀರ್ವದಿಸುವುದು ಆಯಿತು. ಈ ಭಾಷಣವನ್ನು ಇಲ್ಲಿಗೆ ಮುಗಿಸುವೆ.

ನಮಃ ಪಾರ್ವತೀ ಪತಯೇ
ಹರ ಹರ ಮಹಾದೇವ
ಜಾನಕೀಕಾಂತಸ್ಮರಣಂ
ಜಯಜಯರಾಮರಾಮ



ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ಅನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ** **ಟಿಕೆಟ್ ರೂ. ೧--೦೦ (ಹಿರಿಯರಿಗೆ)**

**ರಾತ್ರಿ ೮ ರ ವರೆಗೆ** **„ „ ೦--೫೦ (ಕಿರಿಯರಿಗೆ)**

# ಯಾಮುನಾಚಾರ್ಯರ ಸ್ತೋತ್ರ ರತ್ನ

ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ

(ಮುಂದುವರೆದುದು)

ಕಿಂ ತ್ವೈಷ ಶಕ್ತಿ ಅತಿಶಯೇನ ನತೇ ಅನುಕಂಪ್ಯಃ
ಸ್ತೋತಾ ಅಪಿ ತು ಸ್ತುತಿಕೃತೇನ ಪರಿಶ್ರಮೇಣ
ತತ್ರ ಶ್ರಮಸ್ತು ಸುಲಭೋ ಮಮ ಮಂದಬುದ್ಧೇಃ
ಇತಿ ಉದ್ಯಮೋऽಯಂ ಉಚಿತಃ
ಮಮ ಚ ಅಬ್ಜನೇತ್ರ

ಭಾವಾರ್ಥ :-- ಎಲೈ ಕಮಲಲೋಚನನೇ! ಈಗ ಸ್ತೋತ್ರ ಮಾಡುತ್ತಿರುವ ನಾನು ನನ್ನ ಅತಿಶಯವಾದ ಸಾಮರ್ಥ್ಯದಿಂದ ನಿನ್ನ ದಯೆಗೆ ಅರ್ಹನಾಗುವುದಿಲ್ಲ. ಸ್ತುತಿಸುವುದರಿಂದ ಉಂಟಾಗುವ ದಣಿವಿನಿಂದ ಮಾತ್ರ ದಯೆಗೆ ಪಾತ್ರನಾಗುತ್ತೇನೆ. ಈ ರೀತಿ ಸ್ತುತಿಸುವುದರಲ್ಲಿ ಆಯಾಸ ಹೊಂದುವುದು ಸುಲಭಸಾಧ್ಯವಾಗಿರುವುದರಿಂದಲೇ ಮಂದಬುದ್ಧಿಯಾದ ನನಗೂ ಈ ಪ್ರಯತ್ನ ಉಚಿತವಾಗಿದೆ.

ವಿಶೇಷಾರ್ಥ :-- ಈ ಶ್ಲೋಕದಲ್ಲಿ ಪರಸಿದ್ಧಿಗೆ ಕಾರಣಯಾವುದು ಎಂಬುದನ್ನು ಶ್ರೀ ಯಾಮುನಾಚಾರ್ಯರು ವಿವೇಚಿಸಿದ್ದಾರೆ. ಪರಸಿದ್ಧಿಗೆ ಅಧಿಕಾರಿಯ ಶಕ್ತಿ ಅಥವಾ ಅಶಕ್ತಿಗಳು ಕಾರಣವಲ್ಲ. ಕೇವಲ ಸ್ವಾಮಿಯ ಅನುಗ್ರಹ ಅಥವಾ ಔದಾಸೀನ್ಯವೇ ಕಾರಣ. ಇದರಿಂದ ವೇದಾಂತದ ರಹಸ್ಯಭಾಗದಲ್ಲಿ ತಿಳಿಯಪಡಿಸಲಾದ ಅಂಶವೆಂದರೆ ಪ್ರೇರಣೆಗೆ, ಉದ್ಯಮಕ್ಕೆ ಪ್ರಾಪ್ತಿಗೆ, ಚೇತನನ ಪ್ರಯತ್ನವು ಅಪ್ರಯೋಜಕ. ಚೇತನನಿಗೆ ಸಹಾಯ ನೀಡುವ ಭಗವತ್ಪ್ರಯತ್ನವು ಕಾರಣವಾಗುತ್ತದೆ. ಆದರೆ ಸಂಬಂಧವನ್ನು ಮರೆಯದೆ ನಡೆದುಕೊಳ್ಳಬೇಕಾದುದು ಕೃತ್ಯವಾದುದರಿಂದ ಅಶಕ್ತನ ಲೋಪದೋಷ ನೀಗುವುದು ತಂದೆಯ ಹೊಣೆ. ಆದ್ದರಿಂದ ಮಗನು ನಿರ್ಜೀವಿಯಂತೆ ಉಳಿದುಕೊಳ್ಳಲಾರನು. ತತ್ಕಾರಣ, ಅಚೇತನಕ್ಕಿಂತ ವಿಲಕ್ಷಣವಾದ ವಸ್ತು ಚೇತನ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಕೈಲಾಗದಿದ್ದರೂ ಕೂಗಾಟ ತಪ್ಪದು. ಅದೇ ರೀತಿ ಆಚಾರ್ಯರ ಅಭಿಪ್ರಾಯದಲ್ಲಿ ಕುಗ್ಗಿದ ಶಕ್ತಿಯಾದರೂ ಕೂಗದೇ ಇರಲಾರೆನು ಎಂಬ ಭಾವನೆಯನ್ನು ಮುಂದಿಟ್ಟುಕೊಂಡು, ಅಜ್ಞನೂ ಅಶಕ್ತನೂ ಆದರೂ, ಅದೇ ಕಾರಣದಿಂದ ಅದನ್ನು ಅನುಭವಿಸಲು ಬೇಕಾದ ಶಕ್ತಿಯಿಲ್ಲದಿದ್ದರೂ, ಬಯಕೆಗೆ ತಡೆಯಿಲ್ಲ. ಅಶಕ್ತಿ, ಅಸಾಮರ್ಥ್ಯಗಳನ್ನು ಮುಂದಿಟ್ಟುಕೊಂಡು ಫಲವನ್ನು ಪಡೆಯದಿರಲು ಸಾಧ್ಯವಿಲ್ಲ. ತತ್ಕಾರಣ ತಾನು ಸಮರ್ಥನಂತೆ ಭಗವಂತನಲ್ಲಿ ಮೊರೆಯಿಡುವುದಾಗಿದೆ.

ಇದರ ಪರಿಣಾಮವಾಗಿ ಶಕ್ತಿ, ಅಶಕ್ತಿಗಳು, ಸಿದ್ಧಿ, ಅಸಿದ್ಧಿಗಳಿಗೆ ಕಾರಣವಲ್ಲ. ಬಯಕೆ ಸರ್ವಸಾಧಾರಣವಾದುದು. ಬಲಹೀನನಿಗೂ ಪರಸಿದ್ಧಿ ಆಗಿಯೇ ತೀರಬೇಕು. ಭಗವಂತನು ಕಮಲ ನಯನನಾದುದರಿಂದ ಶಕ್ತ, ಅಶಕ್ತ ಇಬ್ಬರಿಗೂ ಏಕರೂಪವಾದ ಫಲವನ್ನು ನೀಡುತ್ತಾನೆ. ಅಬ್ಜನೇತ್ರ ಎಂಬ ಪದ ಪ್ರಯೋಗದಿಂದ, ಕಮಲವನ್ನು ವಿಕಸಪಡಿಸುವಂತೆ ಮತ್ತು ಅದು ವಿಕಸಿತವಾಗಿ, ಮಧುಪೂರ್ಣವಾಗಿ, ಅಲ್ಲಿ ಝೇಂಕಾರದಲ್ಲಿ ತೊಡಗಿರುವ ದುಂಬಿಗಳಂತೆ ಆನಂದಭರಿತರಾದವರು ಸಾಮಗಾನದಲ್ಲಿ ನಿರತರಾಗುವಂತೆ ಪರಿವರ್ತಿಸಬಲ್ಲ ಸ್ವಭಾವವು ಭಗವಂತನಿಗೆ ಸೇರಿದೆ. ಅದರಲ್ಲಿ ಪಕ್ಷಪಾತವಿಲ್ಲದಿರುವ ಕಾರಣ ಅಯೋಗ್ಯರಲ್ಲಿಯೂ, ಯೋಗ್ಯರಲ್ಲಿ ಮೂಡಿಬರುವ ಆಸೆ ಕಾಣಿಸಿಕೊಳ್ಳುವುದೇನೂ ಆಶ್ಚರ್ಯವಲ್ಲ. ತತ್ಕಾರಣ ಭಗವತ್ಸಮಾಶ್ರಯಣವು ಶಕ್ತಿ ಅಶಕ್ತಿಗಳನ್ನು ಲಕ್ಷಿಸದೆ ಸರ್ವರಿಗೂ ಸ್ವೀಕಾರ ಅರ್ಹವಾದುದು. ಆದ್ದರಿಂದ ಜಾತಿ, ಆಶ್ರಮ, ದೀಕ್ಷೆ ಮುಂತಾದ ವಿಲಕ್ಷಣವಾದ ವೃತ್ತಿ ಮೋಕ್ಷಕ್ಕೆ ಖಂಡಿತವಾಗಿಯೂ ಕಾರಣವಾಗುವುದಿಲ್ಲ. ಸರ್ವರಿಗೂ ಭಗವದನುಗ್ರಹ ಫಲವಾಗಿ ಈ ಯೋಗ್ಯತೆ ಲಭಿಸುತ್ತದೆ. ಆ ಕಾರಣ, ಶಬ್ದ ಬ್ರಾಹ್ಮಣ್ಯಕ್ಕಿಂತ ತತ್ವಬ್ರಾಹ್ಮಣ್ಯವು ಸರ್ವಸಾಧಾರಣವಾದುದು ಮತ್ತು ಚೇತನ ವ್ಯಾಪಾರಕ್ಕೂ ಕಾರಣಭೂತವಾದುದು. ಇದು ಭಗವತ್ಪ್ರೇರಣೆ. ಆದ್ದರಿಂದ ಭಗವಂತನ ಒಲುಮೆಯನ್ನು ಅನುಭವಿಸಲು ಸರ್ವರಿಗೂ ಅಧಿಕಾರ ಉಂಟು. ಇಲ್ಲಿ ಒಂದು ಶ್ಲೋಕವನ್ನು ನೆನಪಿಸಿಕೊಳ್ಳಬಹುದು

ಶ್ವಪಚೋಪಿ ಮಹೀಪಾಲ
ವಿಷ್ಣುಭಕ್ತಾದ್ವಿಜಾಧಿಕಃ

ವಿಷ್ಣುಭಕ್ತಿ ವಿಹೀನಸ್ತು
ಯತಿಶ್ಚ ಶ್ವಪಚಾಧಮಃ

ಭಗವದ್ಭಕ್ತಿಯಿಲ್ಲದವನು ಯತಿಯಾದ ಬ್ರಾಹ್ಮಣನಾದರೂ ಅವನೇ ನಿಜವಾದ ಅತ್ಯಂತ ಹೀನ ಶ್ವಪಚ. ಭಗವದ್ಭಕ್ತರೆಂದೂ ಶ್ವಪಚರಾಗರು. ಅವರು ದ್ವಿಜನಿಗಿಂತಲೂ ಮೇಲ್ಪಟ್ಟವರು.

ವಿಷ್ಣುಭಕ್ತಿಯೆಂದರೆ ಸ್ವಾಮಿಯನ್ನು ಎಂದೆಂದಿಗೂ ಮರೆಯಲಾಗದ, ಎಂದೆಂದಿಗೂ ಉಳಿಸಿಕೊಳ್ಳುವ ಭಾವವಿಶೇಷ. ಜ್ಞಾನರೂಪವಾದ ಸಂಬಂಧ. ಇದಕ್ಕೆ ಕಾರಣ ಚೇತನ ಮತ್ತು ಪರಮಾತ್ಮ ಇಬ್ಬರೂ ಜ್ಞಾನದ್ರವ್ಯ. ಇದನ್ನು ಮರೆಯದಿದ್ದರೆ, ಶರೀರ ದೃಷ್ಟಿಯಿಂದ ಎಂತಹವನಾದರೂ, ಬ್ರಾಹ್ಮಣಶರೀರವನ್ನು ಪಡೆದಿರುವವರಿಗಿಂತ ಮಿಗಿಲಾದವನು. ಈ ಭಾವನೆಯನ್ನು ಮರೆತು ಸಂನ್ಯಾಸಾಶ್ರಮದಲ್ಲಿ ಕಾಲಕಳೆಯುವ ದ್ವಿಜೋತ್ತಮನು ಶ್ವಪಚನಿಗಿಂತ ಕೀಳು. ಶಾಶ್ವತ ಸಂಬಂಧವನ್ನು ಕೈಬಿಡಬಾರದು. ವಿಕಾರದಲ್ಲಿ ಅವಿಕಾರತೆಯನ್ನು ಉಳಿಸಿಕೊಳ್ಳಬೇಕು. ಆದ್ದರಿಂದ ಅಶಕ್ತನೂ ಅನ್ಯನೂ ಆದ ಚೇತನನು ಯಥಾಶಕ್ತಿ ಭಗವತ್ಸ್ಮರಣೆ ಮಾಡುವುದು ಅನುಚಿತವಲ್ಲ. ಆದ್ದರಿಂದ ಆದರ್ಶಪುರುಷನ ದೃಷ್ಟಿಯಲ್ಲಿ ಅನರ್ಹನಾದರೂ, ಪುರುಷತ್ವ ದೃಷ್ಟಿಯಿಂದ ಅವಕಾಶ ಕಳೆದುಕೊಳ್ಳಬಾರದು.

ಅದೇರೀತಿ ಯಾಮುನಾಚಾರ್ಯರು ಭಗವಂತನ ಸ್ಮರಣೆಗೆ ತಮಗೂ ಸ್ವಾಭಾವಿಕವಾದ ಹಕ್ಕು ಇದೆ; ಅದು ಎಷ್ಟೇ ಕೀಳ್ಮಟ್ಟದ್ದಾದರೂ ಅದು ಭಗವತ್ ಸ್ಮರಣೆಯಾದ್ದರಿಂದ ಪರಿಗ್ರಾಹ್ಯ ಎಂದು ಭಾವಿಸಿ ಮೊರೆಯಿಡುತ್ತಾರೆ.

ಈ ಶ್ಲೋಕದಲ್ಲಿ ಗಮನಾರ್ಹವಾದುವು ಲೌಕಿಕಾಂಶ, ವೈದಿಕಾಂಶ. ಅಂದರೆ ಸಂಬಂಧ ಜ್ಞಾನದಿಂದ ಫಲವೇರ್ಪಡುತ್ತದೆ. ಅಧಿಕಾರದಿಂದ ಫಲವನ್ನು ಸಾಧಿಸಿಕೊಳ್ಳಬಲ್ಲೆನು ಎಂಬುದು ಲೌಕಿಕ ಮಾರ್ಗ. ಇದು ಹುಟ್ಟುಗುಣವಲ್ಲ. ಅದು ನಮ್ಮನ್ನು ಕೈಬಿಡಬಹುದು. ಲೌಕಿಕನಾದವನು ವೈದಿಕನಾಗಲು ಭಗವಂತನಲ್ಲಿ ಮೊರೆಯಿಡಬೇಕು. ವಸ್ತುತಃ ಮೊರೆಯಿಡುವುದು ಸ್ವಾಭಾವಿಕ. ನಿರಂತರ ಭಗವದ್ಧ್ಯಾನವು ಅವನ ಪಾಲಿಗೆ ಸಹಜ ಸ್ವಭಾವವಾಗಿ ಉಳಿದುಕೊಳ್ಳುತ್ತದೆ. ಅಬ್ಜನೇತ್ರ -- ಎಂಬ ಪದದಲ್ಲಿ ಸೂಚಿಸಿರುವ ಭಾವವೆಂದರೆ ಸೂರ್ಯೋದಯದಲ್ಲಿ ಕಮಲವು ವಿಕಾಸಗೊಳ್ಳುವಂತೆ ಭಗವಂತನ ಸ್ಮರಣೆಯಲ್ಲಿ ಆತನು ಪೂರ್ಣವಾಗಿ ವಿಕಾಸಗೊ

ಳ್ಳುತ್ತಾನೆ. ಭಗವದನುಭವಕ್ಕೆ ಅನರ್ಹವಾದ ವ್ಯಕ್ತಿ ಇರಕೂಡದು, ಇರುವುದಿಲ್ಲ -- ಇತಿ ಮಮ ಅಯಂ ಉದ್ಯಮಃ ಉಚಿತಃ

ಆವೃತ್ತಿಯಲ್ಲಿ ತೊಡಗಿ ಅದನ್ನು ಗುಟ್ಟಾಗಿ ಇಟ್ಟುಕೊಳ್ಳದೆ ಸದ್ಗುರುವು ಎಲ್ಲರಿಗೂ ಹಂಚುತ್ತಾನೆ. ಇದು ಸದ್ಗುರುವಿನ ಉಪದೇಶ. ತನ್ನಲ್ಲಿ ಮೂಡಿದ ಜ್ಞಾನಾನುಷ್ಠಾನಗಳನ್ನು ಸಮಸ್ತರಿಗೂ ಸಾಧಾರಣವಾಮದರಿಂದ ಸ್ವಾರ್ಥವಿಲ್ಲದೆ ಉಪಯೋಗಕ್ಕಾಗಿ ಬಳಸುವುದು ಚೇತನನ ಸಾಮಾಜಿಕ ಕೃತ್ಯ ಸೇವೆ. ಇದೇ ತದೀಯಾರಾಧನ. ಜನರನ್ನು ತದೀಯರನ್ನಾಗಿ ಮಾಡುವುದಕ್ಕೆ ತತ್ ಶಬ್ದವಾಚ್ಯನಾದ ಪರಮಾತ್ಮನ ಸ್ಮರಣೆಯಲ್ಲಿ ಕಡೆಯಿಲ್ಲದಂತೆ ಅವಕಾಶಕಲ್ಪಿಸಿಕೊಡಬೇಕೆಂಬ ಬಯಕೆ. ಈ ವಿಧವಾದ ಬಾಳುವಿಕೆಯು ಆರಾಧನೆ. ನಿಜವಾದ ಆಚಾರ್ಯನು ತನ್ನ ಉಪದೇಶದಲ್ಲಿ ತನ್ನ ಹಿರಿಯರು ತೋರಿಸಿಕೊಟ್ಟ ಮಾರ್ಗವನ್ನು ಕೈಬಿಡದಿರಬೇಕು ಎಂಬುದೇ ಧ್ಯೇಯ. ಅದನ್ನು ಸರಿಯಾಗಿ ಪಾಲಿಸಬೇಕು ಎಂಬ ನಿಯಮ ಏರ್ಪಡಬೇಕು. ಯಥಾಶಕ್ತಿ ಅದನ್ನು ಉಳಿಸಿಕೊಂಡು ಬರಬೇಕೆಂಬುದೇ ಉದ್ದೇಶ. ಈ ಭಾವನೆಯಿಂದ -- ಕ್ಷಮತು ಮಮ ಸುಲಕ್ಷಃ ಮಂದಬುದ್ಧೇಃ --ಎಂಬ ಮಾತಿನಿಂದ ಸ್ವಗತವಾದ ಅಯೋಗ್ಯತೆಯನ್ನು ಪ್ರಕಾಶಪಡಿಸಿ, ನಿಷ್ಠೆ, ದೃಷ್ಟಿಯಿಲ್ಲದಿದ್ದರೂ, ತಾತ್ಸಾರ ಏರ್ಪಟ್ಟರೂ ಕೈಬಿಡಕೂಡದು ಎಂಬ ಭಾವನೆಯಿಂದ ಭಗವಂತನಲ್ಲಿ ಆಚಾರ್ಯರು ಮೊರೆಯಿಟ್ಟಿದ್ದಾರೆ.

ನ ಅಪೇಕ್ಷಸೇ ಯದಿ
ತತೋ ಭುವನಾನಿ ಅಮೂನಿ
ನ ಅಲಂ ಪ್ರಭೋ ಭವಿತುಮೇವ;
ಕುತಃ ಪ್ರವೃತ್ತಿಃ?
ಏವಂ ನಿಸರ್ಗ ಸುಹೃದಿ
ತ್ವಯಿ ಸರ್ವಜಂತೋಃ
ಸ್ವಾಮಿನ್! ವಿಚಿತ್ರಮ್
ಇದಮ್ ಆಶ್ರಿತವತ್ಸಲತ್ವಂ

ಭಾವಾರ್ಥ:-- ಪ್ರಭುವೇ, ನೀನು ಕಟಾಕ್ಷಿಸದಿದ್ದರೆ ಈ ಲೋಕಗಳು ಇರುವುದಕ್ಕೆ ಸಾಧ್ಯವಿಲ್ಲ. ಹೀಗೆ ಎಲ್ಲಾ ಜಂತುಗಳಿಗೂ ಸ್ವಾಭಾವಿಕ ಮಿತ್ರನಾಗಿರುವ ನಿನ್ನಲ್ಲಿ 'ಆಶ್ರಿತವಾತ್ಸಲ್ಯ' ಎಂಬ ಗುಣವು ವಿಚಿತ್ರವಾಗಿದೆ!

ವಿಶೇಷಾರ್ಥ :-- ಭಗವಂತನು ಸಂಕಲ್ಪ ಮಾಡದೆ ಹೋದರೆ ಯಾವ ಪ್ರವೃತ್ತಿಗೂ ಅವಕಾಶವಿಲ್ಲ ಅಂದಮೇಲೆ ಚೇತನಾಚೇತನ ಮಯವಾದ ಬ್ರಹ್ಮಾಂಡವು ಹೇಗೆ ತಾನೇ ತನ್ನ ವ್ಯಾಪಾರವನ್ನು ಕೈಗೊಳ್ಳಲು ಸಾಧ್ಯ. ಬೇರಿಲ್ಲದೆ ಗಿಡವಿರಲಾರದು. ಬೇರಿಲ್ಲದೆ ಗಿಡಬೆಳೆಯಲಾರದು. ಇದೇ ಪ್ರವೃತ್ತಿ. ಆದಕಾರಣ ಪ್ರಣವದ ಮೊದಲ ಅಕ್ಷರವಾದ ಅಕಾರದಲ್ಲಿ ತೋರಿಬರುವಂತೆ, ಅಕಾರವಾಚ್ಯನಾದ ಪರಬ್ರಹ್ಮನು ಉತ್ಪಾದಕ ಮತ್ತು ಪೋಷಕ. ಇದನ್ನೇ ಉತ್ತರ ಆಚಾರ್ಯರು ನಿಮಿತ್ತ, ಅಭಿನ್ನ ಉಪಾದಾನ ಎಂದಿದ್ದಾರೆ. ಅಂದರೆ ಉತ್ಪತ್ತಿಯೂ ಪರಾಭಿಮುಖವಾದ ಬೆಳವಣಿಗೆಯೂ ಒಂದೇ ವಸ್ತುವಿನಲ್ಲಿ ಉಳಿದುಕೊಂಡಿದೆ. ತತ್ಕಾರಣ ಶಾಸ್ತ್ರವು ಅದ್ವೈತ ಅಂದರೆ ಎರಡು ಪದಾರ್ಥಗಳನ್ನು ಅವಲಂಬಿಸಿಕೊಂಡಿರುವುದಿಲ್ಲ ಎಂಬುದಾಗಿ ಪ್ರಣವದ ಸಪ್ತಾಕ್ಷರದಲ್ಲಿ ನುಡಿದಂತೆ-ಪ್ರಕಾಶಪಡಿಸಿರುತ್ತಾರೆ.

ಮತ್ತೊಂದರೆ ಅಂಶವೆಂದರೆ ಈಶ್ವರನ ಯತ್ನದಲ್ಲಿ ಸಹಾಯ ನೀಡಬಹುದಾದ ಯಾವುದೇ ಪರಿಸ್ಥಿತಿಯೂ ಭುವನದಲ್ಲಿ ಅಡಗಿರುವ ಚೇತನಾ ಚೇತನ ವಸ್ತುಗಳಿಗೆ ತೋರಲು ಅವಕಾಶವೇ ಇಲ್ಲ. ಇದೇ ವೈದಿಕ ತತ್ತ್ವ.

ಲೌಕಿಕವಾದರೆ ಭಾವನೆ ಬೇರೆ. ಉತ್ಪನ್ನವಾದ ಪದಾರ್ಥವು ತನ್ನ ಉತ್ಪಾದಕವಸ್ತುವನ್ನು ಹುಡುಕಿಕೊಂಡು ಹೋಗುತ್ತಾ ಅದನ್ನೇ ಪರಮ ಕಾರಣವೆಂದು ಭಾವಿಸುತ್ತದೆ. ಆದ್ದರಿಂದ ಅದನ್ನು ಕೈಬಿಟ್ಟರೆ ಯತ್ನಫಲಗಳಿಗೆ ಅವಕಾಶವೇ ಇಲ್ಲ ಎಂಬ ಸೇಶ್ವರ ಭಾವನೆ ತೋರಿಬರುತ್ತದೆ. ಇದರಲ್ಲಿ, ಉತ್ಪನ್ನವಾದ ಚೇತನನು ತನ್ನ ಉತ್ಪತ್ತಿಯ ಬಗೆಗೆ ಗಮನಕೊಡುವುದಕ್ಕಿಂತ ತನ್ನ ಸಂರಕ್ಷಣೆ, ಫಲಪ್ರಾಪ್ತಿಗಳಿಗೆ ಸರ್ವೇಶ್ವರನು ಇದ್ದೇತೀರಬೇಕೆಂದು ತನ್ನ ದೃಷ್ಟಿಯಿಂದ ತಿಳಿದುಕೊಳ್ಳುತ್ತಾನೆ. ಈ ಸಂಬಂಧವು ಫಲನಿಮಿತ್ತ. ಜನ್ಮಕ್ಕೆ ಕಾರಣವಾದರೆ ಜನ್ಮಪಡೆದ ವಸ್ತುವಿನ ಬೆಳವಣಿಗೆಗೂ ಅವನೇ ಕಾರಣನಾಗುತ್ತಾನೆ. ಅಂದಮೇಲೆ ಚೇತನನ ಪಾಲಿಗೆ ಉಳಿದಿರುವುದು ಸ್ವರೂಪಸಿದ್ಧವಾದ ಕರ್ತವ್ಯವನ್ನು ಬಿಡದಿರುವುದು. ಇದು ಸರ್ವಥಾ ತೃಪ್ತಿಕರ. ಇದನ್ನು ಅರಿಯದೆ ತನ್ನ ಮನೋರಥವನ್ನು ಈಡೇರಿಸಿಕೊಳ್ಳಲು ಮಾತ್ರ ಭಗವಂತನ ಸಹಾಯಬೇಕು ಎಂಬುದು ಲೌಕಿಕಭಾವ. ವೇದಾಂತದಲ್ಲಿ ತಿಳಿಸಿರುವಂತೆ ಭಗವಂತನ ಸಂಕಲ್ಪವಿಲ್ಲದಿದ್ದರೆ -- ಭವಿತುಮೇವನಾಲಂ-- ಹುಟ್ಟುವುದಕ್ಕೆ ಸಾಧ್ಯವಿಲ್ಲ ಅಂದಮೇಲೆ ಬಾಳುವ ವಿಚಾರವು ಚೇತನನಿಗೆ ಸ್ವಾಧೀನ ಎಂಬುದು ಏಳುವುದಿಲ್ಲ. ಈ ಶ್ಲೋಕವನ್ನು ಮನಸ್ಸಿನಲ್ಲಿಟ್ಟುಕೊಂಡು ಶ್ರೀರಾಮಾನುಜಾಚಾರ್ಯರು ಶಾರೀರಕ ಎಂಬ ಭಾವನೆಯಿಂದ ತಮ್ಮ ವೇದಾಂತದ ವಿವರಣೆಯನ್ನು ನೀಡಿರುತ್ತಾರೆ. ಭಗವಂತನು ಪ್ರಭು. ಇರುವುದು, ಬೆಳೆಯುವುದು ಇವೆರಡಕ್ಕೂ ಅವನೇ ಕಾರಣ. ಇದು ತತ್ತ್ವದ ಸ್ಥಿತಿ.

ಆ ಪರತತ್ತ್ವದ ರಕ್ಷಣೆಯ ರೀತಿ ಅಂದರೆ ವ್ಯಾಪಾರವನ್ನು ವಿವರಿಸಲಾಗಿದೆ. ಏವಂ ನಿಸರ್ಗ ಸುಹೃದಿ -- ಈ ಸನ್ನಿವೇಶದಲ್ಲಿ ಸಹಜವಾಗಿ, ಸ್ವಾಭಾವಿಕವಾಗಿ ಉತ್ಪನ್ನವಸ್ತುಗಳ ಬೆಳವಣಿಗೆ ಮತ್ತು ಭೋಗಗಳಿಗೆ ಗಮನಕೊಟ್ಟು, ಸ್ವಾಮಿಯಾದ ತನ್ನ ಒಡೆತನವನ್ನು ಉಳಿಸಿಕೊಂಡು ಬರುವ ಆಶ್ರಿತವತ್ಸಲತ್ವಂ -- ಅಂದರೆ ತನ್ನ ಅಧೀನವಸ್ತುಗಳ ಮೇಲಿನ ಮಮತೆ ಸ್ವಾಭಾವಿಕವಾದುದು. ಈ ಭಾವನೆಯನ್ನರಿತು ಅದಕ್ಕೆ ವಿರುದ್ಧವಾಗಿ ನಡೆದುಕೊಳ್ಳದಿರುವುದೇ ಸಾಮಾನ್ಯವಾಗಿ ಜೀವಾತ್ಮನ ಪ್ರಯತ್ನ ಸಹಾಯ ಪ್ರಾರ್ಥನೆ, ಸಂತತದುಡಿಮೆ. ಈ ಆಶ್ರಿತರ ರಕ್ಷಣಾತ್ವವು ತನ್ನ ವಶದಲ್ಲಿರುವ ವಸ್ತುಗಳನ್ನು ಕೈಬಿಡದೆ ಕುಗ್ಗದಿರುವಂತೆ ರಕ್ಷಿಸಿಕೊಳ್ಳುವುದು ಭಗವಂತನ ಸಹಜಗುಣ, ಲಕ್ಷಣ.

ಈ ಶ್ಲೋಕದ ಮುಖ್ಯಪ್ರಾರ್ಥನೆ -- ಸರ್ವಂ ಖಲ್ವಿದಂ ಬ್ರಹ್ಮ--ಎಲ್ಲವೂ ಬ್ರಹ್ಮ--ಎಂಬ ವಾಕ್ಯದಲ್ಲಿ ತೋರಿಬರುವ ಸಂಬಂಧ ಪರಿಜ್ಞಾನ. ಅದಕ್ಕನುಗುಣವಾಗಿ ಈಶ್ವರನು ಇವುಗಳನ್ನು ಕೈಬಿಡದಿರುವ ಸಂಕಲ್ಪ, ಇವುಗಳ ಉಜ್ಜೀವನ. ಆರಂಭದಿಂದ ಕೊನೆಯವರೆಗೆ ಇವನ ಏಳಿಗೆಗೆ ಸಂತತ ಇತರರ ಸಹಾಯವಿಲ್ಲದೆ ಎಲ್ಲ ಕೆಲಸವೆಸಗುವನು. ಚೇತನನು ಅರಿಯದಿದ್ದರೂ ಒಪ್ಪದಿದ್ದರೂ ಅವನು ಅರಿಯು

ನವರೆಗೂ ಪರೋಕ್ಷವಾಗಿದ್ದು ಅವನ ಉಜ್ಜೀವನಕ್ಕೆ ಹೊಣೆಗಾರನಾಗಿ ಸಂತತ ರಕ್ಷಣೆಯಲ್ಲಿ ತೊಡಗಿರುವುದು ನಿಜವಾದ ಪ್ರಭುವಿನ ಲಕ್ಷಣ. ಅಕಾರ ವಾಚ್ಯನಾದ ಪ್ರಭು, ಉತ್ಪನ್ನ ವಸ್ತುಗಳ ಸರ್ವವಿಧ ರಕ್ಷಕನು. ರಕ್ಷಕತ್ವವು ಅಕಾರದಲ್ಲೇ ಉಳಿದುಕೊಂಡಿದೆ. ಆದ್ದರಿಂದ ವೈದಿಕವಾದ ಪ್ರಣವದ ಪ್ರಥಮಾಕ್ಷರದ ಸ್ವರೂಪವನ್ನು ಬಲ್ಲವನು ಯಾಮುನಾಚಾರ್ಯರ ವಿವರಣೆಗೆ ತಲೆದೂಗುತ್ತಾನೆ.

ಈ ಶ್ಲೋಕದಲ್ಲಿ ಆಚಾರ್ಯರು ಛಾಂದೋಗ್ಯದ ಕ್ರಮವನ್ನು ಅನುಸರಿಸಿದ್ದಾರೆ. ಲೌಕಿಕ ವೈದಿಕ ಕ್ರಮಗಳಲ್ಲಿ ತತ್ವಸ್ವರೂಪಗಳು ಭಿನ್ನವಾಗಿರುವುದಿಲ್ಲ. ವೈದಿಕದಲ್ಲಿ ಉತ್ಪತ್ತಿಕ್ರಮ. ಲೌಕಿಕದಲ್ಲಿ ಪ್ರಾಪ್ತಿಕ್ರಮ. ಇವೆರಡರ ಐಕ್ಯವನ್ನು ಮನಗಾಣಬೇಕಾದುದು ಮುಖ್ಯ.

ಸ್ವಾಭಾವಿಕ ಅನವಧಿಕಾತಿಶಯ ಈಶಿತತ್ವಂ
ನಾರಾಯಣ! ತ್ವಯಿ ನ ಮೃಷ್ಯತಿ ವೈದಿಕಃ ಕಃ?
ಬ್ರಹ್ಮಾಶಿವಃ ಶತಮಖಃ ಪರಮಸ್ವರಾಟ್ ಇತಿ
ಏತೇಪಿ ಯಸ್ಯ ಮಹಿಮಾರ್ಣವ ವಿಪ್ರುಷಸ್ತೇ

ಭಾವಾರ್ಥ :-- ಸ್ವಾಭಾವಿಕವೂ, ಮಿತಿಯಿಲ್ಲದುದೂ, ಶ್ರೇಷ್ಠವೂ ಆದ ಸರ್ವಾಧಿಪತ್ಯವು ನಿನ್ನಲ್ಲಿದೆ ಎಂಬ ಅಂಶವನ್ನು ಯಾವ ವೈದಿಕನು ತಾನೇ ಒಪ್ಪುವುದಿಲ್ಲ? ಬ್ರಹ್ಮ, ಶಿವ, ಇಂದ್ರ ಮತ್ತು ಇವರಿಗಿಂತ ಶ್ರೇಷ್ಠವಾದ ಮುಕ್ತಜೀವ ಎಂಬ ಇವರೆಲ್ಲರೂ ಆ ನಿನ್ನ ಮಹಿಮಾಸಮುದ್ರದ ಜಲಬಿಂದುಗಳು ಮಾತ್ರ!

ವಿಶೇಷಾರ್ಥ :-- ಈ ಶ್ಲೋಕದಲ್ಲಿ ವೈದಿಕ ದರ್ಶನವು ಪೂರ್ಣವಾಗಿ ಬೆಳಕಿಗೆ ಬಂದಿದೆ. ಇದು ವೇದಾಂತಸಾರ. ಅವಶ್ಯ ತಿಳಿಯಬೇಕಾದುದು. ಆದರೆ ಸರ್ವಸುಲಭವಲ್ಲ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಜಗತ್ತಿಗೆ ಜ್ಞಾನದೀವಿಗೆಯನ್ನು ಅರ್ಪಿಸಿರುವ ಮಹಾತ್ಮರು ಯಾಮುನಾಚಾರ್ಯರು. ಇದು ತದೀಯಾರಾಧನೆ, ಅಂದರೆ ಪರರಿಗೆ ಸಲ್ಲಿಸುವ ಸೇವೆ. ಇದರಲ್ಲಿ ಸ್ವಾರ್ಥ ಎಳ್ಳಷ್ಟೂ ಕಾಣಿಸಿಕೊಳ್ಳುವುದಿಲ್ಲ.

ಸಮಾಜದಲ್ಲಿ ಸೇವಾಪರನೇ ಸಾಮಾಜಿಕ. ಇದೇ ಸಂನ್ಯಾಸ ಶಬ್ದಾರ್ಥ. ಅಂದರೆ ಸನ್ನಿವೇಶದಿಂದ ಸೇವೆಯನ್ನು ಬಿಡಬಾರದು. ಅದರಲ್ಲಿ ತಾನು, ತನಗೆ ಎಂಬ ಅಹಂ ಮಮ ಭಾವನೆ ಕಾಣಿಸಿಕೊಳ್ಳಕೂಡದು. ಪ್ರಕೃತಿಯೊಡನೆ ಕೂಡಿದ ಚೇತನನು ಸಂಗಜನಿತ ಅಹಂ, ಮಮ ಎಂಬ ದೋಷಗಳನ್ನು ಸೇರಿಸಿಕೊಳ್ಳದಿದ್ದರೆ ಅವನು -- ಅತ್ರ ಬ್ರಹ್ಮಸಮಶ್ನುತೇ -- ಎಂಬಂತೆ ಇಲ್ಲಿ ತಕ್ಷಣ ಬ್ರಹ್ಮನಾಗಿ ಕಾಣಿಸಿಕೊಂಡು ಬ್ರಹ್ಮಾನುಭವದಲ್ಲೇ ಕಾಲಕಳೆಯುತ್ತಾನೆ ಎಂದು ಪೂರ್ಣಪಾಪವನ್ನು ಕಳೆದ ಚೇತನನ ಮಹಿಮೆಯನ್ನು ಕೊಂಡಾಡುತ್ತಾರೆ. ಇದು ಹುಟ್ಟುಗುಣದ ಹೆಮ್ಮೆಯ ವೈಭವ. ಹೊಸದಾಗಿ ಸಂಪಾದಿಸಿಕೊಳ್ಳುವ ಹಿರಿಮೆಯಲ್ಲ. ಇವಕ್ಕೆ ನಮ್ರತೆ, ವಿನತಭಾವ ಎಂದು ಹೆಸರು. ಈ ವೇದಾಂತದ ಕ್ಲಿಷ್ಟತಮವಾದ ಭಾಗವನ್ನು, ಸರ್ವಮೂಲವಾದ ತತ್ವವನ್ನು ಅತಿಸುಲಭರೀತಿಯಲ್ಲಿ ಸಮಾಜಕ್ಕೆ ತಾನು ಒಪ್ಪಿಸುತ್ತೇನೆ ಎಂಬ ಅಹಂಭಾವನೆಯಿಲ್ಲದೆ ಮತ್ತು ಒಪ್ಪಿಸದಿದ್ದರೆ ತನ್ನ ಜೀವಿತವೆಲ್ಲ ವ್ಯರ್ಥವೆಂದು ಮನಗಂಡ ಮಹಾತ್ಮರು, ಗಾರ್ಹಸ್ಥದಲ್ಲಿ ದೋಷ ಸಂಭಾವನೆ ಏರ್ಪಡಬಹುದು ಎಂಬ ಶಂಕೆಯಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ಲೌಕಿಕ ಭಾವಕ್ಕೆ ಎಳ್ಳಷ್ಟೂ ಅವಕಾಶಕೊಡದೆ ಉತ್ತಮೋತ್ತಮರಾದರು.

ಆಶ್ರಿತವಾತ್ಸಲ್ಯ ತತ್ವ ಒಂದು ಮನಸ್ಸಿಗೆ ಕಾಣಿಸಿಕೊಂಡಮೇಲೆ ಅದನ್ನು ತಿಳಿದು, ತನ್ನನ್ನು ಸರ್ವಥಾ, ಸರ್ವದಾ, ಸರ್ವತ್ರ ರಕ್ಷಣೆಯಲ್ಲಿ ಉಳಿಸಿಕೊಳ್ಳದೇ ಕೆಂದೂ, ಯಾವ ರೀತಿಯಲ್ಲೂ ಆಶ್ರಯ ಮತ್ತು ರಕ್ಷಣೆಯನ್ನು ತಪ್ಪಿಸಬಾರದೆಂದು ಮೊರೆಯಿಡುವ ಮನೋವೃತ್ತಿಯು ಸಂನ್ಯಾಸವಾಗುತ್ತದೆ. ನ್ಯಾಸವೆಂದರೆ ಸಮರ್ಪಣೆ. ಸಂ ಎಂಬ ಉಪಸರ್ಗದಿಂದ ಪೂರ್ಣ ಸಮರ್ಪಣೆ ಎಂದರ್ಥ. ಸರ್ವೇಶ್ವರನ ಮೂಲಕ ಅವನ ಸೌಹಾರ್ದಕ್ಕೆ ಒಳಪಟ್ಟ ವಸ್ತುಗಳಂತೆ ತಾನೂ ಇರುವುದರಿಂದ ಅವರ ಸೇವೆಯಲ್ಲಿ ತೊಡಗುವುದು ಪ್ರವೃತ್ತಿರೂಪವಾದ ಸಂನ್ಯಾಸವೆಂದು ಬಗೆಯುವುದು ಅತಿಶ್ರೇಷ್ಠವಾದ ಆಶ್ರಮವಾಗುತ್ತದೆ. ಈ ಮಹತ್ವಪೂರ್ಣವಾದ ಭಾಗ್ಯವು ಚೇತನನಿಗೆ ಸೇರಿದುದು. ಅಹಂಕಾರರಹಿತವಾದ ಲೋಕಸೇವಾನಿರತತ್ವವು ಜನ್ಮಸ್ವಭಾವವಾದುದು. ಇದು ಬಯಸಬೇಕಾದುದು. ಇಲ್ಲದಿದ್ದರೆ ಸ್ವರೂಪನಾಶ ಎಂಬ ಭಾವವನ್ನು ಮೊಟ್ಟಮೊದಲಾಗಿ ಆಚಾರ್ಯವರ್ಯರು ಈ ಶ್ಲೋಕದಲ್ಲಿ ಹೃದಯಂಗಮವಾಗಿ ಪ್ರಕಾಶಪಡಿಸಿರುತ್ತಾರೆ.

ವೇದಗಳಲ್ಲಿ ದ್ರಷ್ಟವ್ಯ, ಕರ್ತವ್ಯ --ಅಂದರೆ ತಿಳಿಯಬೇಕಾದುದು, ಮಾಡಬೇಕಾದುದು ಎಂಬುದಾಗಿ ನೋಟ, ನಡೆಗಳನ್ನು ಕೂಲಂಕಷವಾಗಿ ಪ್ರಕಾಶಪಡಿಸಲಾಗಿದೆ. ನೋಟವು ಪರಬ್ರಹ್ಮ, ನಡತೆಯು ಅವನ ಸೇವೆ, ಸಮಾಶ್ರಯಣ, ಈ ಮೂಲತತ್ವವನ್ನು ಒಳಗೊಂಡಿರುವ ಶಬ್ದವೆಂದರೆ ಪ್ರಣವ. ಪ್ರ -- ಪರಿಪೂರ್ಣತೆ, ನವ -- ದ್ರಷ್ಟವ್ಯ ಪದಾರ್ಥವು ಕಾಣಿಸಿಕೊಳ್ಳುತ್ತದೆ. ಈ ದ್ರಷ್ಟವ್ಯವನ್ನು ಪರಿಪೂರ್ಣವಾಗಿ ತಿಳಿದು, ತತ್ಫಲವಾಗಿ ಲೋಪದೋಷವಿಲ್ಲದೆ ಅಂತೆಯೇ ಜೀವನದಲ್ಲಿ ಉಳಿಸಿಕೊಳ್ಳುವುದು ಚೇತನನ ಸಂತತ ಧ್ಯೇಯವಾಗಿ ಉಳಿದುಕೊಳ್ಳಬೇಕು. ಇದನ್ನು ಅರಿಯುವುದು ಕಷ್ಟ. ಬಾಳುವುದು ಅತ್ಯಾನಂದಕರ. ಈ ಭಾವನೆಯನ್ನು -- ಸರ್ವೇಷಾಂ ಸ್ವಾದಯನ್ -- ಎಲ್ಲರಿಗೂ ಲಭ್ಯವಾಗುವಂತೆ, ಮನಸ್ಸು ಸೆಳೆಯುವ ರೀತಿಯಲ್ಲಿ ವೇದಾಂತಸಾರವನ್ನು ಪ್ರತ್ಯೇಕಿಸಿ ಜನರಿಗೆ ಅಮೃತಪ್ರಾಶನಕ್ಕೆ ಆಚಾರ್ಯರು ಅರ್ಪಿಸಿರುತ್ತಾರೆ.

ಈ ಪ್ರಕರಣದಲ್ಲಿ ವೇದಾಂತದಲ್ಲಿ ತೋರಿಬರುವ ಪರತತ್ವವಾಚಕ ಶಬ್ದಗಳನ್ನು ಬಳಸದೆ ಸರ್ವಾರ್ಥ ಸಂಗ್ರಹವಾದ ನಾರಾಯಣ ಶಬ್ದವನ್ನು ಮೊಟ್ಟಮೊದಲಾಗಿ ಬಳಸುತ್ತಾರೆ. ಬದರೀನಾಥನ ಮೂಲಕ ಹೊರಬಿದ್ದ ನಾರಾಯಣ ಶಬ್ದದ ಹಿರಿಮೆಯನ್ನು ಪ್ರತ್ಯೇಕತೆಯನ್ನು ಸಮಗ್ರತೆಯನ್ನು ಸರ್ವಮೂಲ ಭೂತತೆಯನ್ನು ಗಮನಿಸಿ, ಅದರ ಮಹಿಮೆಯನ್ನು ಪ್ರಕಾಶಪಡಿಸಲು ಹವಣಿಸುತ್ತಾರೆ. ಈ ಶಬ್ದವನ್ನು ಉಪದೇಶಮಾಡಿದವನು ನಾರಾಯಣ. ಉಪದೇಶ ಪಡೆದ ನರನು ಏಕದೇಶವಾದ ನಾರವರ್ಗಕ್ಕೆ ಸೇರಿರುತ್ತಾನೆ. ಹಿಂದೆ ನುಡಿದಂತೆ ವಾತ್ಸಲ್ಯಕಂದವಾದ ಭಗವಂತನು, ವಾತ್ಸಲ್ಯಪಾತ್ರವಾದವನು ನರ. ಪರಮಾರ್ಥ ಪ್ರಕಾಶಕವಾದ ನಾರಾಯಣ ಶಬ್ದವನ್ನು ಅರಿತುಕೊಂಡರೆ ಚೇತನನು ಅಕಾರಾರ್ಥ ತಿಳಿದ ಜ್ಞಾನಿಯಾಗುತ್ತಾನೆ. ಇದನ್ನು ತಿಳಿದು ಈ ರೀತಿ ನಡೆದುಕೊಳ್ಳುವವನು ವೈದಿಕ. ಜೀವಿತದಲ್ಲಿ ತ್ಯಾಜ್ಯೋಪಾದೇಶ ವಿವೇಕವನ್ನು ನಾರಾಯಣ ಮಂತ್ರದಲ್ಲಿ ಅಡಗಿರುವುದನ್ನು ವಿವರಿಸಲು, ಪ್ರಪ್ರಥಮವಾಗಿ ಬ್ರಹ್ಮಾದಿ ಶಬ್ದಪ್ರಯೋಗವನ್ನು ಬಿಟ್ಟು, ನಾರಾಯಣ ಮಂತ್ರೋಪದೇಶವನ್ನು ಬಳಸಿ, ವಿವರಿಸಿ, ಶುದ್ಧತತ್ವವನ್ನು ಎಲ್ಲರೂ ಅರಿಯುವಂತೆ ಮಾಡಿ, ಅದರಂತೆ ನಡೆದುಕೊಂಡು ಸರ್ವಾವಸ್ಥೆಯಲ್ಲೂ ಆನಂದಸಾಗರದಲ್ಲಿ ಅವಗಾಹನೆಮಾಡಲು ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ತತ್ಕಾರಣ ಈ ಗ್ರಂಥಕ್ಕೆ ಸ್ತೋತ್ರರತ್ನವೆಂಬ ಹೆಸರು ಏರ್ಪಟ್ಟಿದೆ.

ಭಗವಂತನ ಈಶ್ವರತ್ವವು ಅವನ ಐಶ್ವರ್ಯವೆನ್ನಬಹುದು. ಅವನಿಗೆ ಸಹಜವಾಗಿ ಅದಕ್ಕಿಂತಲೂ ಮಿಗಿಲಾದುದು ಯಾವುದೂ ಇಲ್ಲವೆಂಬುದು ಅರ್ಥವಾಗುತ್ತದೆ. ಆದ್ದರಿಂದ ಪರಬ್ರಹ್ಮನು ಸರ್ವೇಶ್ವರನೆಂದು ತೋರಿಸಿಕೊಳ್ಳುತ್ತಾನೆ. ಈಶ್ವರನೆಂದರೆ ಸಿರಿವಂತ. ಆ ಸಿರಿಯನ್ನು ತನ್ನ ಇಷ್ಟದಂತೆ ವಿನಿಯೋಗಿಸಿಕೊಳ್ಳಬಲ್ಲ ಸ್ವಭಾವವಿಶೇಷ ಉಳ್ಳವನು. ಆ ವಿನಿಯೋಗಕ್ರಮವೇ ರಕ್ಷಣೆಗೆ ಸೇರಿದ ವ್ಯಾಪಾರ. ಇದರಿಂದ ಭಗವಂತನು ಸರ್ವೇಶ್ವರನಾಗುತ್ತಾನೆ. ಈ ಸರ್ವೇಶ್ವರತ್ವವು ನಾರಾಯಣನಲ್ಲಿ ಗೋಚರವಾಗುತ್ತದೆ. ನಾರಾಯಣತ್ವವು ಸರ್ವೇಶ್ವರತ್ವದ ಉಸಿರು ಮತ್ತು ವಿವರಣೆಯಾಗಿದೆ. 'ಈಶಾವಾಸ್ಯಂ' ಎಂಬ ಉಪನಿಷತ್ ಗತ ಶಬ್ದದಿಂದ ವಿವರಣೆ ದೊರ

ಕುತ್ತದೆ. ಈಶಾವಾಸ್ಯ ಎಂದರೆ ಸರ್ವ ಈಶ್ವರ. ಸರ್ವ ಎಂಬುದು ವಿಶೇಷಣ. ಇದೇ ಸ್ವಾಭಾವಿಕ ಮತ್ತು ಅನವಧಿಕಾತಿಶಯವಾದುದು. ಈಶನೆಂದರೆ ಒಡೆಯ ಅಂದರೆ ಅವನಲ್ಲದೆ ಬೇರೆಯಾಗಿ ಅವನ ಐಶ್ವರ್ಯವು ತೋರುವುದಿಲ್ಲ ಮತ್ತು ಅವೆಲ್ಲವೂ ಒಟ್ಟಾಗಿಯೂ, ಪ್ರತ್ಯೇಕವಾಗಿಯೂ ಈಶ್ವರನಿಗೆ ವಶ್ಯವಾಗಿವೆ. ಇದಕ್ಕೆ ಪರ್ಯಾಯವಾದುದು ನಾರಾಯಣವೆಂಬಪದ. ನಾರವೆಂಬುದರಲ್ಲಿ ಸಕಲವೂ ಅಡಗಿವೆ. ಅವುಗಳಿಗೆ ಸರ್ವದೇಶ ದಶಾ ಕಾಲಗಳಲ್ಲಿ ಅಯನ -- ಪೋಷಣೆ, ಆಶ್ರಯ ಪ್ರಕಾಶಪಡಿಸುವ ವ್ಯಕ್ತಿ ನಾರಾಯಣ. ನಾರಾಯಣ ಪದಾರ್ಥಕ್ಕೆ ಏರ್ಪಟ್ಟಿರುವ ಭಾವನೆಯನ್ನು ರೂಢಿಸುವುದು ಸರ್ವೇಶ್ವರ ಶಬ್ದದ ಗುರಿ. ತತ್ಕಾರಣ ಪರದೇವತೆಗಳೆಲ್ಲರೂ ನಾರಾಯಣ ಮಹಿಮೆ ಎಂಬ ವಿಪುಲ ಸಾಗರದಲ್ಲಿ ಸಣ್ಣ ಸಣ್ಣ ತುಂತುರುಗಳು. ಅಂದರೆ ಅವನು ಸರ್ವಾಶ್ರಯ, ಸರ್ವರಕ್ಷಕ, ಸರ್ವೇಶ್ವರ. ಈ ತತ್ವವನ್ನು ಆಚಾರ್ಯರು ಈ ಶ್ಲೋಕದಲ್ಲಿ ಪ್ರಕಟಪಡಿಸಿದ್ದಾರೆ.

ಕಃ ಶ್ರೀಃ ಶ್ರಿಯಃ? ಪರಮ
ಸತ್ವ ಸಮಾಶ್ರಯಃ ಕಃ?
ಕಃ ಪುಂಡರೀಕನಯನಃ?
ಪುರುಷೋತ್ತಮಃ ಕಃ?
ಕಸ್ಯ ಅಯುತಾಯುತ
ಶತ್ಯೆಕ ಕಲಾಂಶಕಾಂಶೇ
ವಿಶ್ವಂ ವಿಚಿತ್ರಂ ಚಿದ್
ಅಚಿತ್ ಪ್ರವಿಭಾಗ ವೃತ್ತಂ?

ಭಾವಾರ್ಥ :-- ಲಕ್ಷ್ಮಿಗೂ ಅತಿಶಯ ಉಂಟುಮಾಡುವವನು ನೀನಲ್ಲದೆ ಬೇರೆಯಾರು? ಮೋಕ್ಷಾಪೇಕ್ಷೆಯೆಂಬ ಸತ್ವಗುಣಕ್ಕೆ ಪ್ರವರ್ತಕನು ನೀನಲ್ಲದೆ ಬೇರೆಯಾರು? ಪುಂಡರೀಕಾಕ್ಷನು ನೀನಲ್ಲದೆ ಬೇರೆಯಾರು? ಪುರುಷೋತ್ತಮನೂ ಬೇರೆ ಯಾರು ? ನಿನ್ನ ಹತ್ತುಸಾವಿರ ಭಾಗದಲ್ಲಿನ ಒಂದು ಪಾಲಿನ ಹತ್ತುಸಾವಿರ ಅಂಶದಲ್ಲಿನ ಒಂದು ಅಂಶದ ನೂರನೇ ಒಂದು ಭಾಗದ ಒಂದು ಕಲೆಯ ಅಂಶದ ಕನಿಷ್ಠಾಂಶದಲ್ಲಿ ಅಲ್ಲದೆ ಬೇರೆ ಯಾರ ಅಂಶದಲ್ಲಿ ಈ ವಿಶ್ವವು ತನ್ನ ಚಿತ್ ಮತ್ತು ಅಚಿತ್ ರೂಪಗಳ ಬೇರೆಬೇರೆ ವಿಭಾಗಗಳೊಡನೆ ನೆಲಸಿದೆ ?

ವಿಶೇಷಾರ್ಥ :-- ಈ ಶ್ಲೋಕದಲ್ಲಿ ಒಡೆಯನಾದ ಪರಮಾತ್ಮನಿಗೆ ಚೇತನಾಚೇತನ ಸಮೂಹವಾದ ಸಕಲ ಜಗತ್ತುಗಳೂ, ಅವುಗಳ ಭೇದಗಳು ಮತ್ತು ಪರಸ್ಪರ ಕರ್ತವ್ಯಗಳೂ ಅವನ ಅಧೀನವೆಂದು ಹೇಳಿ, ಸರ್ವೇಶ್ವರನಾರಾಯಣ ಎಂಬ ಪದಗಳ ವಿವರಣೆಯನ್ನು ಮತ್ತಷ್ಟು ಸ್ಪಷ್ಟಪಡಿಸಲಾಗಿದೆ.

ಶ್ರಿಯಃ ಶ್ರೀಃ ಕಃ -- ಎಂದು ಶ್ರಿಯಃ ಪತಿತ್ವವನ್ನು ಕೊಂಡಾಡಲಾಗಿದೆ. ಶ್ರೀ ಶಬ್ದವು ಐಶ್ವರ್ಯ ಸೂಚಕವೆಂದರೆ, ಅವನೊಡನೆ ಕೂಡಿಕೊಂಡಿರುವ ಪದಾರ್ಥಗಳೆಲ್ಲವೂ ಅವನ ಬೆಡಗನ್ನು ತೋರಿಸುತ್ತವೆ. ಮತ್ತೊಂದು ಮುಖ್ಯವಾದ ಅಂಶವೆಂದರೆ ಇವುಗಳಿಂದ ಅವನಿಗೆ ಯಾವ ಮಿರುಗೂ ಇಲ್ಲ. ಅಂದರೆ ಅವನ ಸಂಬಂಧದಿಂದ ಇವುಗಳಿಗೆ ಉತ್ಕೃಷ್ಟತಮವಾದ ಮಿರುಗು ಏರ್ಪಡುತ್ತದೆ. ಇದನ್ನೇ ವೈಭವ ಎಂಬ ಪದದಿಂದ ತಿಳಿಯಬೇಕಾದುದು.

ಇದರಲ್ಲಿ ಮೊಟ್ಟಮೊದಲಾಗಿ ತಿಳಿಯಬೇಕಾದುದು ಶ್ರೀದೇವಿಯು ಪರಮಾತ್ಮನನ್ನು ಸೇರಿ ತನ್ನ ವೈಭವವನ್ನು ಪಡೆಯುತ್ತಾಳೆ. ಆದ್ದರಿಂದ ಶ್ರಿಯಃ ಶ್ರೀಃ. ಅಮೃತಮಥನಕಾಲದಲ್ಲಿ ಕೊನೆಯಲ್ಲಿ ಕಾಣಿಸಿಕೊಂಡ ಶ್ರೀದೇವಿಯು ಸರ್ವಸಾಕ್ಷಿಕವಾಗಿ ವರಿಸಲ್ಪಟ್ಟವಳು.

ಸರ್ವಲೋಕ ಸಾಕ್ಷಿಕವಾಗಿ ವಿಷ್ಣುವಿನ ಹೃದಯವನ್ನು ಪ್ರವೇಶಿಸಿದಳು. ಈ ಶ್ರೀದೇವಿಯು ವಕ್ಷಸ್ಥಳವನ್ನು ಪ್ರವೇಶಿಸಲು ಕಾರಣವೆಂದರೆ ಎಂದೆಂದಿಗೂ ಅಗಲಿಕೆ ಏರ್ಪಡಕೂಡದು ಮತ್ತು ತನ್ನಂತೆಯೇ ಇತರರಿಗೂ ಭಾಗ್ಯವನ್ನು ಹೊಂದಿಸಿಕೊಡಲು ಪರಮಾತ್ಮನ ಹೃದಯವಾಸಿಯಾಗಿ, ಜಗದ್ರಕ್ಷಣೆಗಾಗಿ ತನ್ನ ಜೀವಿತವನ್ನು ಮುಡುಪಾಗಿಸಿದ್ದಾಳೆ. ಆದ್ದರಿಂದ ಇವಳಿಗೆ ಪುರುಷಕಾರವೆಂಬ ವಿಲಕ್ಷಣವಾದ ಕೃತ್ಯಪ್ರಯುಕ್ತವಾದ ಹೆಸರು. ಯಾವನಿಂದ ನೆಮ್ಮದಿಯೋ ಅವನನ್ನು ಬಿಡಕೂಡದು. ಅವನು ಒಬ್ಬನೇ ಆದ ಸರ್ವೇಶ್ವರ. ಇದು ಪುರುಷಸೂಕ್ತದಲ್ಲಿ ಪ್ರಕಟವಾಗಿದೆ.

ಈಶ್ವರನ ಸಂಗದಿಂದ ಸ್ವಾತ್ಮಲಾಭವನ್ನು ಶ್ರೀದೇವಿ ಪಡೆದಳು. ಅವನನ್ನು ಬಿಡಲಾರದೆ ಇರಬೇಕೆಂಬ ಬಯಕೆಯು ನಿತ್ಯಯೋಗ. ಅವಳು ವೈಯಕ್ತಿಕಳಾಗಿ ಕೃತಾರ್ಥಳಾದಳು. ಅವನ ಆಕರ್ಷಕ ಶಕ್ತಿ ಅವಳನ್ನು ಎಳೆಯಿತು. ಇದರಿಂದ ಉಳಿದವರೆಲ್ಲರೂ ಅವಳ ಅನುಗ್ರಹಕ್ಕೆ ಭಾಗಿಗಳು. ಆ ಅನುಗ್ರಹವನ್ನು ಭಗವಂತನು ಪುರುಷನಾದುದರಿಂದ ಅವಳು ಒದಗಿಸಬೇಕು. ಅದಕ್ಕಾಗಿ ದುಡಿಯುವವಳು ಶ್ರೀದೇವಿ. ಈ ಐಶ್ವರ್ಯವು ಅತ್ಯುತ್ತಮವಾದುದು. ಅವಳು ಭಗವಂತನಲ್ಲಿರುವ ಪುರುಷತ್ವವನ್ನು, ಉಜ್ಜೀವನಕ್ಕೆ ಏರ್ಪಟ್ಟಿರುವ ಗುಣಗಳನ್ನು ಉಪಯೋಗಿಸುವಂತೆ ಮಾಡುತ್ತಾಳೆ. ಶ್ರೀದೇವಿಯ ನಡತೆಯಿಂದ ಕಸವೂ ಸುವರ್ಣಸರವಾಗುತ್ತದೆ. ಆದರೆ ಪುರುಷಕಾರ ಶಬ್ದಕ್ಕೆ ಸಹಜವಾದ ಅರ್ಥ ಪುರುಷನಾದ ಪರಮೇಶ್ವರನಲ್ಲಿರುವ ಉದ್ಧಾರ ಮಾಡುವ ಶಕ್ತಿಯನ್ನು ನೆನಪಿಗೆ ತಂದುಕೊಂಡುವ ವ್ಯಕ್ತಿ ಶ್ರೀದೇವಿ. ಇದರಿಂದ ಭಗವಂತನ ಸಂಪರ್ಕದಿಂದ ತಾನು ಶ್ರೀಯಾಗಿ ಉಳಿದುಕೊಳ್ಳಬೇಕೆಂಬ ಜನಸಮುದಾಯದ ಏಳಿಗೆಗೆ ಗಮನಕೊಟ್ಟವಳು ಶ್ರೀದೇವಿ.

ಶ್ರಿಯಃ ಶ್ರೀಃ ಕಃ -- ಆ ಶ್ರೀದೇವಿಗೆ ಈ ಶ್ರೀಯತ್ವ ನೀಡಿರುವುದು ಯಾವುದೋ ಅವನೇ ಸರ್ವೇಶ್ವರ. ಶ್ರೀದೇವಿಯಿಂದ ಅವನು ಸರ್ವೇಶ್ವರನಾಗುವುದಿಲ್ಲ. ಅವನು ಸರ್ವೇಶ್ವರನಾದುದರಿಂದ ಶ್ರೀದೇವಿಯನ್ನು ತೋರಿಸಿಕೊಟ್ಟು ಅವಳಂತೆ ಚೇತನರು ಬಾಳಬೇಕೆಂಬ ಅಮೋಘಭಾವವನ್ನು ತೋರಿಸಿಕೊಟ್ಟವನು ಪರಮಾತ್ಮ. ಶ್ರೀಯತ್ ಶ್ರೀಃ -- ಶ್ರೀದೇವಿಗೂ ಕೂಡ ಶ್ರೀಯನ್ನು ಹೊಂದಿಸಿದವನು. ಆದ್ದರಿಂದ ಪೂಜಾಪ್ರಕರಣದಲ್ಲಿ ಶ್ರೀದೇವಿಯೊಡನೆ ಕೂಡಿದ್ದರೂ ಪೂಜೆ ನಡೆಯುವುದು ಶ್ರಿಯಃ ಪತಿಗೆ ಸರ್ವೇಶ್ವರನಿಗೆ ಶ್ರಿಯಃಪತಿತ್ವವು ತಪ್ಪಿದ್ದಲ್ಲ. ಸರ್ವೇಶ್ವರನಾಗಿರಬೇಕಾದರೆ ಶ್ರೀದೇವಿಗೂ ಶ್ರೀ ಆಗಿರಬೇಕು.

ಪರಮಸತ್ವಸಮಾಶ್ರಯಃ ಕಃ -- ಉತ್ತಮೋತ್ತಮವಾದ ಬದಲಾವಣೆಗೆ ಒಳಗಾಗದ ಸನ್ನಿವೇಶಕ್ಕೆ ಆಶ್ರಯಭೂತನಾದವನು ಪರಮಾತ್ಮ. ಅವನಿಂದಲೇ ಸರ್ವಮಂಗಳವೇ ವಿನಾ ಅವನಿಗೆ ಇವುಗಳಿಂದ ಯಾವ ಔನ್ನತ್ಯವೂ ಏರ್ಪಡುವುದಿಲ್ಲ. ಅವನು ಸರ್ವವಿಧದಲ್ಲೂ ಈಶ್ವರ, ಸ್ವಯಂ ಈಶ್ವರ, ಅವನು ಪುಂಡರೀಕನಯನನು ಅಂದರೆ ಕಮಲಾಕ್ಷನು. ಅವನ ನೇತ್ರಗಳು ಸಕಲಪದಾರ್ಥಗಳನ್ನು ದೋಷದೂರ ಸರಿದು ತಾವರೆಯು ಪೂರ್ಣವಾಗಿ ವಿಕಾಸಹೊಂದುವಂತೆ ಆನಂದಕಾಂಡವಾಗುವಂತೆ ಮಾಡುತ್ತವೆ. ಅವನು ಪುರುಷೋತ್ತಮ ಅಂದರೆ ಅಚೇತನವನ್ನು ಬಳಸುವುದಕ್ಕೆ ಅರ್ಹತೆ ಪಡೆದವನು ಚೇತನ. ಆ ಕಾರಣ ಅವನು ಪುರುಷ. ಈ ಪುರುಷ ರಾಶಿಯಲ್ಲಿ ಉತ್ತಮನಾದವನು ಎಂದರೆ ಎಂದೆಂದಿಗೂ ತನ್ನ ಈಶ್ವರತ್ವವನ್ನು ಬಿಟ್ಟು ಕೊಡದವನು. ಜೀವಾತ್ಮಸಾದೃಶ್ಯವಿದ್ದರೂ ಅವನಿಗಿಂತ ಅತ್ಯಂತ ವಿಲಕ್ಷಣನಾದವನು.

ಭಗವಂತನ ಅವಯವದಲ್ಲಿ ಒಂದು ಸಣ್ಣ ಅಂಶವು ಎಲ್ಲಾ ಜಗತ್ತು ಎಂಬ ತತ್ವವನ್ನು ಹರಡಿ ಈಶ್ವರನ ಅನವಧಿಕ ಅತಿಶಯವನ್ನು ಸ್ಪಷ್ಟಪಡಿಸಲಾಗಿದೆ. ಆನೆಗೆ ಸಣ್ಣನೊಣವಿದ್ದಂತೆ ಭಗವಂತನಿಗೆ ವಿಶಿಷ್ಟ ಚೇತನಾಚೇತನ ಸಮೂಹ. ಅದಕ್ಕಾಗಿಯೇ ಅವನನ್ನು ನಿರ್ದೇಶಿಸುವ ಸಮಯದಲ್ಲಿ ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ ಎಂದು ವಿಶೇಷಣವನ್ನು ನೀಡಲಾಗಿದೆ. ಆದ್ದರಿಂದ ಈ ಶ್ಲೋಕದ ಉತ್ತರಾರ್ಧದಲ್ಲಿ ನುಡಿದಿರುವಂತೆ ಸಮಸ್ತ ಅಂಡಗಳೂ ಬ್ರಹ್ಮನಿಗೆ ಸೇರಿದುವು. ಇಂತಹ ಅಂಡಗಳ ಕೋಟಿಕೋಟಿಗಳಿಗೆ ಏಕಮಾತ್ರ ನಾಯಕನು ಆ ಸರ್ವೇಶ್ವರನು ಎಂದು ವರ್ಣಿಸಲಾಗಿದೆ.

ಚಿತ್ರಗಳು -- ಎಂ. ಸುದರ್ಶನ

# ನಾಗುಲಾಪುರದ ಶ್ರೀ ವೇದನಾರಾಯಣಸ್ವಾಮಿ

---ಬಿ. ಎನ್. ಎಸ್.

ನಾಗುಲಾಪುರ -- ವೇದನಾರಾಯಣಸ್ವಾಮಿಯು ನೆಲೆಸಿರುವ ಕ್ಷೇತ್ರ. ಭಗವಂತನ ಅವತಾರಗಳಿಗೆ -- ಅವುಗಳಲ್ಲಿ ಹೆಚ್ಚಿಗೆ ರಾಮಕೃಷ್ಣ ನರಸಿಂಹ ಅವತಾರಗಳಿಗೆ --ಮಂದಿರಗಳು ಅಸಂಖ್ಯಾತ. ಮೊದಲವತಾರಗಳಾದ ಮತ್ಸ್ಯ ಕೂರ್ಮ, ವರಾಹ, ವಾಮನ -- ತ್ರಿವಿಕ್ರಮಾವತಾರಗಳಿಗೆ ಮೀಸಲಾದ ಮಂದಿರಗಳು ಆ ಹೋಲಿಕೆಯಲ್ಲಿ ಕಡಮೆ. ಕಚ್ಛಪೇಶ್ವರ ದೇವಾಲಯ ಶ್ರೀಕೂರ್ಮದಲ್ಲಿದ್ದರೆ ಮತ್ಸ್ಯರೂಪೀ ನಾರಾಯಣನಿಗೆ ನಾಗುಲಾಪುರದಲ್ಲಿ ದೇವಾಲಯವಿದೆ. ವೇದಗಳನ್ನು ಉದ್ಧರಿಸಿದವನೆಂದು ಈತನನ್ನು ವೇದನಾರಾಯಣಸ್ವಾಮಿ ಯೆನ್ನಲಾಗಿದೆ.

ತಿರುಪತಿಯಿಂದ ಪುತ್ತೂರು ಊತ್ತುಕೋಟ್ಟೈ ಮಾರ್ಗವಾಗಿ ಮದರಾಸಿಗೆ ಹೋಗುವ ಹಾದಿಯಲ್ಲಿ ಪುತ್ತೂರಿನಿಂದ ಸುಮಾರು ಮುವತ್ತು ಕಿಲೋಮೀಟರ್ ದೂರದಲ್ಲಿರುವ ಕಿರಿಯ ಗ್ರಾಮ ನಾಗುಲಾಪುರ. ವಿಜಯನಗರದರಸ ಶ್ರೀ ಕೃಷ್ಣದೇವರಾಯ ಪಾಂಡ್ಯ ರಾಜರ ಮೇಲಿನ ವಿಜಯದಿಂದ ಹಂಪೆಗೆ ಹಿಂದಿರುಗುತ್ತಿರುವಾಗ ವೇದ ಪುಷ್ಕರಿಣಿಯ ಬಳಿಯಲ್ಲಿ ತಂಗಿದ್ದು ಅಲ್ಲಿಯೇ ಇದ್ದ ವೇದ ನಾರಾಯಣ ಸ್ವಾಮಿಯ ಬಗ್ಗೆ ಕೇಳಿತಿಳಿದು ಸ್ವಾಮಿಯನ್ನು ದರ್ಶಿಸಿದ. ಅಲ್ಲಿನ ಪ್ರಶಾಂತ ವಾತಾವರಣ, ಸುಂದರ ಪ್ರಕೃತಿ ಆತನಿಗೆ ತನ್ನ ತಾಯಿ ನಾಗಲಾಂಬಿಕೆಯ ನೆನಪನ್ನು ತಂದುಕೊಟ್ಟಿತು. ಗುಡಿಯನ್ನು ಜೀರ್ಣೋದ್ಧಾರಗೊಳಿಸಿ, ವಿಸ್ತರಿಸಿ, ಪೂಜಾ ಕೈಂಕರ್ಯ ವ್ಯವಸ್ಥೆ ಮಾಡಿ, ಗುಡಿಯ ಸುತ್ತ ನಗರವನ್ನೆಬ್ಬಿಸಿದ. ಅದನ್ನು ನಾಗುಲಾಪುರವೆಂದು ಕರೆದ ತಾಯಿಯ ನೆನಪಿನಲ್ಲಿ.

ಪುರಾಣ ಕಥೆಯಂತೆ ವೇದಗಳನ್ನು ಕದ್ದೋಡಿದ ಸೋಮಕನನ್ನು ಸಂಹರಿಸಿ ವೇದೋದ್ಧಾರ ಮಾಡಿದ ಸ್ವಾಮಿ ಇಲ್ಲಿಯೇ ನೆಲೆಸಿದ ಬ್ರಹ್ಮನಿಗೆ ವೇದಗಳನ್ನು ಒಪ್ಪಿಸಿ. ಬಂಗಾಳ ಕೊಲ್ಲಿಯಿಂದ ನಲವತ್ತು ಕಿಲೋಮೀಟರ್ ದೂರವಿರುವ ಇಲ್ಲಿನ ವೇದ ಪುಷ್ಕರಿಣಿಯಿಂದಲೇ ವೇದಗಳನ್ನು ಮೇಲೆತ್ತಿದನೆನ್ನುತ್ತದೆ ಸ್ಥಳಪುರಾಣ. ಇಲ್ಲಿ ನೆಲೆನಿಂತ ವೇದನಾರಾಯಣನಿಗೆ ಮಂದಿರ ನಿರ್ಮಿಸಿ ನಾಲ್ಕು ಗೋಪುರಗಳನ್ನೂ ಮಂಟಪಗಳನ್ನೂ ನಿರ್ಮಿಸಿದ. ಹಾಗಾಗಿಯೇ ವರ್ಷದಲ್ಲಿ ಮೂರುದಿನ ಸೂರ್ಯನು ಗರ್ಭಗುಡಿಯೊಳಗಿನ ಮೂಲ ಮೂರ್ತಿಗೆ ಕಿರಣರೂಪದಲ್ಲಿ ನಡೆದುಬಂದು ನಮಿಸುತ್ತಾನೆ ಎನ್ನುತ್ತಾರೆ. ದೇವಾಲಯದಲ್ಲಿ ದೊರೆತ ಒಂದು ಶಾಸನದ ಪ್ರಕಾರ ಎಂಬೆರುಮಾನರು (ದೇವರು) ಹರಿದಾಸ ಎಂಬುವವನ ಕನಸಿನಲ್ಲಿ ಬಂದು ಇಲ್ಲಿನ ವೇದನಾರಾಯಣಸ್ವಾಮಿಗೆ ಮಂದಿರವೊಂದನ್ನು ನಿರ್ಮಿಸಲು ಆಜ್ಞಾಪಿಸಿದರು. ಅದರಂತೆ ಗುಡಿಯ ನಿರ್ಮಾಣವಾಗಿದೆ.

ಹತ್ತು ಎಕರೆಗಿಂತ ಹೆಚ್ಚಿನ ಪ್ರದೇಶದಲ್ಲಿ ಹರಡಿರುವ ವೇದನಾರಾಯಣಸ್ವಾಮಿ ದೇವಾಲಯ ಐದು ಪ್ರಾಕಾರಗಳನ್ನು ಒಳಗೊಂಡಿದ್ದಿತೆಂದು ಸ್ಥಳವಂದಿಗರು ಹೇಳಿದರೂ ಈಗ ಕಂಡುಬರುವುದು ಮೂರು ಮಾತ್ರವೇ. ಹೊರಗಣ ಪ್ರಾಕಾರದಲ್ಲಿ ನಾಲ್ಕೂ ದಿಕ್ಕಿನಲ್ಲಿ ನಾಲ್ಕು ದ್ವಾರ ಗೋಪುರಗಳಿದ್ದರೂ ಅವೆಲ್ಲ ಜೀರ್ಣಾವಸ್ಥೆಯಲ್ಲಿವೆ. ಭಾರೀ ಗಾತ್ರದ ಬಿದ್ದುಹೋಗುತ್ತಿರುವ ಪ್ರಾಕಾರದ ಗೋಡೆಗಳನ್ನೂ ಕಾಣಬಹುದು. ಮೂರು ಕಡೆಯ ದ್ವಾರ ಗೋಪುರಗಳನ್ನು ಒಳದಾರಿಗಳನ್ನೂ ಮುಚ್ಚಲಾಗಿದ್ದು ಪಶ್ಚಿಮದ ಕಡೆಯಿಂದ ಮಾತ್ರವೇ ಪ್ರವೇಶ. ಕಾರಣ ಸ್ವಾಮಿ ಪಶ್ಚಿಮಾಭಿಮುಖವಾಗಿ ನಿಂತಿರುವಿಕೆ. ಈ ಮಣ್ಣಿನ ಹೊರಪ್ರಾಕಾರದ ಗೋಪುರದಿಂದ ಒಳಬಂದರೆ ಎರಡನೆಯ ದ್ವಾರ ಗೋಪುರಕ್ಕೂ ಇದಕ್ಕೂ ನಡುವೆ ನೀರು ನೆರಳು ಸಿಗುವಂತೆ ಉದ್ಯಾನ ನಿರ್ಮಿಸಲಾಗಿದೆ. ಇಲ್ಲಿಯೇ ಒಂದು ಕಡೆಗೆ ಚಿಕ್ಕ ಕೊಳವೊಂದೂ ಉಂಟು. ಇಲ್ಲಿಂದ ಮುಂದಿರುವ ಭಾಗವನ್ನೆಲ್ಲಾ -- ಗೋಪುರಗಳನ್ನೂ ಒಳಗೊಂಡಂತೆ ತಿರುಮಲೆ ತಿರುಪತಿ ದೇವಸ್ಥಾನದವರು ದೇವಾಲಯವನ್ನು ತಮ್ಮ ಆಡಳಿತದ ಪರಿಧಿಗೆ ಪಡೆದ ನಂತರ ಜೀರ್ಣೋದ್ಧಾರ ಮಾಡಿಸಲಾಗಿದೆ.



ಪಶ್ಚಿಮದ ದ್ವಾರಗೋಪುರದ ಮೂಲಕ ಒಳಕ್ಕೆ ಬಂದರೆ ಬಲಿಪೀಠ ಧ್ವಜಸ್ಥಂಭಗಳ ಮುಂದೆ ದೊಡ್ಡದಾದ ಪ್ರವೇಶದ್ವಾರದಲ್ಲಿ ನಿಂತ ಭಂಗಿಯ ಗಣಪತಿ, ವೈಷ್ಣವೀ ದುರ್ಗೆಯರು ದ್ವಾರಪಾಲಕರಾಗಿ ಭಕ್ತರನ್ನು ಸ್ವಾಗತಿಸುತ್ತಾರೆ. ಇದಕ್ಕೂ ಮೊದಲು ವಿಶಾಲವಾದ ಪ್ರದಕ್ಷಿಣಾ ಪಥವಿದೆ. ಮೂರು ಅಡಿ ಎತ್ತರದ ತಳಹದಿಯ ಮೇಲೆ ಸುತ್ತನಿಂತ ಪ್ರಾಕಾರದ ಗೋಡೆಯನ್ನು ಸೇರಿದಂತಹ ಮಂಟಪದ ಸಾಲು, ನಾಲ್ಕೂ ದಿಕ್ಕಿನಲ್ಲೂ ಇದ್ದು ಒಂದೊಂದು ಮೂಲೆಯಲ್ಲೂ ಒಂದೊಂದು ಕಿರುದೇಗುಲಗಳಿವೆ. ಪಶ್ಚಿಮದ ದ್ವಾರದ ಒಳಹೊಕ್ಕ ಮೇಲೆ ಎಡಕ್ಕೆ ಮಂಟಪದಲ್ಲಿ ಮೂರು --ವೀರ ಆಂಜನೇಯ, ಕೋದಂಡರಾಮ ಸೀತಾಲಕ್ಷ್ಮಣ, ಲಕ್ಷ್ಮೀನರಸಿಂಹ ದೇಗುಲಗಳಿವೆ. ಉತ್ಸವ ವಿಗ್ರಹಗಳೂ ಉಂಟು. ಅದೇ ಮಂಟಪದಲ್ಲಿ ಮುಂದುವರೆದಾಗ ರಾಮಸೀತೆಯರ ವಿಗ್ರಹಕ್ಕೆ ಎದುರಾಗಿ ಭಕ್ತಾಂಜನೇಯನ ಕಿರಿಯ ವಿಗ್ರಹವಿರುವ ಗುಡಿಯಿದೆ. ದೇವಾಲಯದ ಬಲಕ್ಕೆ ಹಿಂಭಾಗದಲ್ಲಿ ಈ ಸಾಲು ಮಂಟಪದ ಮೂಲೆಯಲ್ಲಿ ಅಡುಗೆಯಮನೆ. ಅದರೆದುರಿಗೆ ಎಂದರೆ ಪಶ್ಚಿಮದ್ವಾರದ ಒಳಕ್ಕೆ ಬಲಕ್ಕೆ ವೇದವಲ್ಲೀ ತಾಯಾರ್ ಈ ಗುಡಿ -- ವಿಶಾಲವಾದ ಮುಖಮಂಟಪ, ಸುಖನಾಸಿ, ಗರ್ಭಗುಡಿಗಳಿವೆ. ಇತರ ಕಿರಿಯ ದೇಗುಲಗಳು ಮಂಟಪದ ಒಳಗೆ ಸೇರಿಹೋಗಿದ್ದರೆ ವೇದವಲ್ಲಿ ತಾಯಾರ್ ಗುಡಿ ಪ್ರತ್ಯೇಕವಾಗಿದೆ. ಉತ್ಸವ ವಿಗ್ರಹವೇನಿಲ್ಲವಾದರೂ ಹಂಸ ಶೇಷವಾಹನಗಳನ್ನಿಲ್ಲಿಡಲಾಗಿದೆ.

ದೇವಾಲಯವನ್ನು ಪ್ರವೇಶಿಸುತ್ತಿದ್ದಂತೆ ಮುಖಮಂಟಪಕ್ಕೆ ಮೊದಲೇ ಗಣಪತಿ ವೈಷ್ಣವಿಯರು

ದ್ವಾರದಲ್ಲಿ ನಿಂತು ಸ್ವಾಗತಿಸುವರು. ಒಳಗೆ ವಿಶಾಲವಾದ ನಾಲ್ಕು ಸಾಲಿನಲ್ಲಿ ಆರುಕಂಭಗಳ ನವರಂಗ. ೪೫ ಅಡಿ ಹಾಗೂ ೫೫ ಅಡಿ ವಿಸ್ತಾರದ್ದು, ಕಂಭಗಳ ಮೇಲೆ ಗರುಡ, ಆಂಜನೇಯ, ಪದ್ಮಾಸನೆ ದೇವಿ, ಬಾಲಕೃಷ್ಣ ಮುಂತಾದ ಕೆತ್ತನೆಗಳಿವೆ. ಹಲವುಉಲ್ಲೇಖನೀಯ ಕೆತ್ತನೆಗಳೆಂದರೆ ನಾಲ್ಕು ಕರಗಳ ವೇಣು ಗೋಪಾಲ, ಶಿವಲಿಂಗವನ್ನು ಹೊತ್ತಿರುವ ಆಂಜನೇಯ ಮೊದಲಾದವು. ಮುಂದೆ ಬಂದರೆ ಅಂತರಾಳ--ಸುಕನಾಸಿ. ಇಲ್ಲಿ ಉತ್ಸವ ವಿಗ್ರಹಗಳನ್ನಿಡಲು ಒಂದು ಪ್ರತ್ಯೇಕ ಕೊಠಡಿಯನ್ನು ಏರ್ಪಡಿಸಲಾಗಿದೆ. ಲೋಹದಲ್ಲಿ ಮಾಡಲಾದ ಹನ್ನೆರಡು ಮಂದಿ ಆಳ್ವಾರರ ವಿಗ್ರಹಗಳಿವೆ. ವೇದವಲ್ಲಿ ಅಮ್ಮನವರ ಉತ್ಸವ ವಿಗ್ರಹವೂ ಇದೆ. ರಾಮಾನುಜಾಚಾರ್ಯರ, ವಿಶ್ವಕ್ಸೇನ, ಆಂಜನೇಯರ ವಿಗ್ರಹಗಳೂ ಇವೆ.

ಗರ್ಭಗೃಹದಲ್ಲಿ ಆಳೆತ್ತರದ ವೇದನಾರಾಯಣಸ್ವಾಮಿ ನೋಡಲು ಹೃದಯಂಗಮವಾಗಿದೆ. ಪ್ರಯೋಗಚಕ್ರ ಹೊಂದಿರುವ ಸ್ವಾಮಿ ಸೋಮಕಾಸುರ ಸಂಹಾರಿ. ಅಭಯ ಕಟಿಹಸ್ತನಾಗಿರುವ ಸ್ವಾಮಿಗೆ ಕಿರೀಟ ಕರ್ಣಕುಂಡಲ ಕಂಠಹಾರ ಮೊದಲಾದ ಆಭರಣಗಳಿದ್ದರೂ ಭಕ್ತರು ಮೊದಲು ಗಮನಿಸುವುದು ಭಗವಂತನ ಪಾದಗಳನ್ನು. ಇಲ್ಲಿ ಪಾದಶೂನ್ಯ, ಮತ್ಸ್ಯರೂಪಿ ತಳಭಾಗ ಎದ್ದುಕಾಣುತ್ತದೆ. ಶ್ರೀದೇವಿ ಭೂದೇವಿಯರು ಇಕ್ಕೆಲದಲ್ಲೂ ಸ್ವಾಮಿಯೊಡನೆ ನಿಂತು ಭಕ್ತರಿಗೆ ದರ್ಶನ ನೀಡುತ್ತಾರೆ.


ಗಣಪತಿ

ಅಂತರಾಳದಿಂದ ಗರ್ಭಗುಡಿ ಒಂದುಕಾಲಕ್ಕೆ ಪ್ರತ್ಯೇಕವಾಗಿದ್ದಿರಬೇಕು ಎನ್ನಲು ಅಲ್ಲಿರುವ ಒಳ ಪ್ರದಕ್ಷಿಣಾ ಪಥ ಆಧಾರವಾಗಬಹುದು. ಈ ಪ್ರದಕ್ಷಿಣಾ ಪಥಕ್ಕೂ ಗರ್ಭಗುಡಿಗೂ ಮಧ್ಯೆ ಎರಡೂವರೆ ಅಡಿ ಆಳದ ೪ ಅಡಿ ಅಗಲದ ಅಂತರವಿದೆ ಸುತ್ತಲೂ. ಈ ಪ್ರದಕ್ಷಿಣಾ ಪಥದಲ್ಲಿ ಮುಂದುವರೆಯುತ್ತ ಗರ್ಭಗುಡಿಯ ಹೊರಗಿನ ಗೋಡೆಗಳ ಮೇಲಿನ ಅಪೂರ್ವ ಶಿಲ್ಪಗಳನ್ನು ನೋಡಬಹುದು.


ವೈಷ್ಣವಿದುರ್ಗ



ಬ್ರಹ್ಮ

ಗಣೇಶ, ವೈಷ್ಣವಿದುರ್ಗೆ, ಬ್ರಹ್ಮ, ವೀಣಾದಕ್ಷಿಣಾಮೂರ್ತಿ ಮೊದಲಾದವು. ಎಲ್ಲ ನಿಂತ ಭಂಗಿಗಳಲ್ಲಿರುವುವೇ. ಗರ್ಭಗುಡಿಯ ಹಿಂಭಾಗದಲ್ಲಿನ ಪ್ರದಕ್ಷಿಣಾ ಪಥದಲ್ಲಿ ಒಂದು ಸಾಲು ವಿಗ್ರಹಗಳು ಹಯಗ್ರೀವ, ಭೂವರಾಹಸ್ವಾಮಿ, ಲಕ್ಷ್ಮೀನರಸಿಂಹಸ್ವಾಮಿ, ಎಲ್ಲವೂ ಸೇರಿ ಈ ಒಳ ಪ್ರದಕ್ಷಿಣಾ ಪಥ ಒಂದು ವಿಗ್ರಹ ಸಂಗ್ರಹ ಶಾಲೆಯಾಗಿದೆ. ನೋಡುತ್ತ ನಿಲ್ಲುವ ಮನವಾಗುತ್ತದೆ. ನವಾಬರ ಆಳ್ವಿಕೆಯ ಕಾಲಕ್ಕಿಂತ ಮುಂಚೆ ಇನ್ನೂ ಅನೇಕ ವಿಗ್ರಹಗಳಿದ್ದಿತೆಂದು ಸ್ಥಳೀಯರ ಹೇಳಿಕೆ.

ವೇದನಾರಾಯಣಸ್ವಾಮಿಗೆ ದಿನವೂ ಸುಪ್ರಭಾತದಿಂದ ಏಕಾಂತ ಸೇವೆಯವರೆಗೆ ಎಲ್ಲ ಪೂಜೆಗಳೂ ನಡೆಯುತ್ತವೆ. ಮಧ್ಯಾಹ್ನದ ಹೊತ್ತಿನಲ್ಲಿ ೧೨ ರಿಂದ ನಾಲ್ಕರವರೆಗಿನ ಬಿಡುವನ್ನು ಬಿಟ್ಟರೆ ಬೆಳಗ್ಗೆ ಆರರಿಂದ ರಾತ್ರಿ ಒಂಬತ್ತರ ವರೆಗೆ ತೆರೆದೇ ಇರುವುದು. ಬ್ರಹ್ಮೋತ್ಸವ ತೆಪ್ಪೋತ್ಸವ ಪಂಚಪವನ ಏಕಾದಶೀ ಶ್ರವಣ ಮೊದಲಾದವೂ ನಡೆಯುತ್ತವೆ. ಇಲ್ಲಿನ ಮತ್ತೊಂದು ವೈಶಿಷ್ಟ್ಯವೆಂದರೆ ಚೈತ್ರಮಾಸದಲ್ಲಿ ಮಾರ್ಚ್ ೨೫, ೨೬, ೨೭, ರಂದು ನಡೆಯುವ ಸೂರ್ಯಪೂಜೆ. ಮೊದಲದಿನ ಸ್ವಾಮಿಯ ಪಾದದ ಮೇಲೂ (ಮತ್ಸ್ಯರೂಪಿಯ ಬಾಲ) ಎರಡನೆಯ ದಿನ ನಾಭಿಯ ಮೇಲೂ ಮೂರನೆಯದಿನ ಕಿರೀಟದ ಮೇಲೂ ಸೂರ್ಯ ಕಿರಣಗಳು ಹೊಳೆಯುತ್ತವೆ. ಮಂದಿರ ನಿರ್ಮಾಣದ ಒಂದು ಚಮತ್ಕಾರದ ಈ ದೃಶ್ಯವನ್ನು ವೀಕ್ಷಿಸಲು ಸುತ್ತಮುತ್ತಲ ಅಸಂಖ್ಯ ಜನರು ತಂಡೋಪತಂಡವಾಗಿ ಬರುವುದುಂಟು.

ದೇವಾಲಯದ ಹೊರಗೆ ಉತ್ತರದ ಗೋಪುರದ ಬಳಿ ಹರಿಕಂಡೇಶ್ವರ ಹಾಗೂ ನವಗ್ರಹದ ಗುಡಿಗಳಿವೆ. ಸೋಮಕನ ಸಂಹಾರವಾದ ಮೇಲೆ ವೇದಪುಷ್ಕರಿಣಿಯಿಂದ ವೇದಗಳನ್ನು ಹೊರತಂದ ಸ್ವಾಮಿಯನ್ನು ನೋಡಲು ದೇವತೆಗಳೆಲ್ಲ ಬಂದರು. ಆಗ ಹರಿಯನ್ನು ಮೊದಲು ನೋಡಿದವ ಈಶ್ವರ. ಅದರ ನೆನಪಿನಲ್ಲಿ ಹರಿಕಂಡ ಈಶ್ವರನ ಗುಡಿ. ನವಗ್ರಹದ ಗುಡಿಯಲ್ಲಿ ಹೆಸರೇ ಹೇಳುವಂತೆ ನವಗ್ರಹಗಳಿವೆ. ನಾಗುಲಾಪುರದಿಂದ ತಿರುಪತಿಗೆ ಬರುವ ದಾರಿಯಲ್ಲಿಯೇ ಪುತ್ತೂರಿನ ಬಳಿ ನಾರಾಯಣವನವಿದೆ. ಇಲ್ಲಿ ತಿ.ತಿ.ದೇವಸ್ಥಾನಗಳ ಆಡಳಿತದ ಪರಿಧಿಯಲ್ಲಿಯೇ ಇರುವ ಕಲ್ಯಾಣ ವೆಂಕಟೇಶ್ವರ ಸ್ವಾಮಿ ದೇವಾಲಯ ವಿಜಯನಗರ ಕಾಲದ ಶಿಲ್ಪ ಶೋಭೆಯಿಂದ ಕೂಡಿದ್ದು ಆಕಾಶರಾಜ, ಪದ್ಮಾವತೀ, ತಿರುಮಲೆಯ ಸ್ವಾಮಿಗಳೊಂದಿಗೆ ಪೌರಾಣಿಕ ಸಂಬಂಧ ಹೊಂದಿದುದಾಗಿದೆ. ನಾಗುಲಾಪುರದ ಬಳಿಯಲ್ಲೇ ಇರುವ ಸುರುಟುಪಲ್ಲಿಯಲ್ಲಿ ಮಲಗಿರುವ ಶಿವನ ವಿಗ್ರಹವಿರುವ ಅಪೂರ್ವವಾದ ಶಿವ ದೇವಾಲಯವೂ ಇದೆ.

ಇತಿಹಾಸದಲ್ಲಿ ದಾಖಲೆಯಾಗಿರುವ ನಾಗುಲಾಪುರದ ಬಗ್ಗೆ ಹತ್ತಾರು ಶಾಸನದ ಸಾಕ್ಷಿಗಳೂ ಇದ್ದು ಇವೆಲ್ಲ ತಮಿಳುನಾಡಿನ ಚೆಂಗಲ್ಪೇಟೆ ಜಿಲ್ಲೆಯ ಶಾಸನ ಸಂಗ್ರಹದಲ್ಲಿ (ಮದ್ರಾಸು ಎಪಿಗ್ರಾಫಿಕಲ್ ರಿಪೋರ್ಟ್) ದಾಖಲೆಯಾಗಿವೆ. ಶ್ರೀಕೃಷ್ಣದೇವರಾಯನು ಕ್ರಿ.ಶ. ೧೫೨೩ ರಲ್ಲಿ ನಾಗುಲಾಪುರಕ್ಕೆ ಎರಡು ಬಾರಿ ಬಂದಿದ್ದ ಎಂಬುದನ್ನು (ಶಾಸನದಲ್ಲಿ ಉಕ್ತ



ಹಯಗ್ರೀವ



ವೀಣಾ ದಕ್ಷಿಣಾಮೂರ್ತಿ

ವಾದ ಅಂದಿನ ಹೆಸರು -- ಅರಿಗಂಡಪುರ) ಸೂಚಿಸಿದರೆ, ಒಂದು ತಾಮ್ರಶಾಸನ ಹಲವಾರು ಹಳ್ಳಿಗಳನ್ನು ದೇವಾಲಯಕ್ಕೆ ನೀಡಿ ಅದನ್ನು ನಿರ್ಮಿಸಿದ ಹರಿದಾಸನಿಗೆ ಒಂದು ಹಳ್ಳಿಯನ್ನು ನೀಡಿದ್ದನ್ನು ತಿಳಿಸುತ್ತದೆ. ಹಲವು ಹಳ್ಳಿಗಳನ್ನು ನೀಡಿದ ಒಂದು ಶಿಲಾಶಾಸನ ಕನ್ನಡದಲ್ಲೂ ಇದೆ. ಶ್ರೀರಂಗದೇವರಾಯನ ಕಾಲದ ಒಂದು ಶಾಸನ ತಮಿಳಿನಲ್ಲಿದ್ದು ವೇದವಲ್ಲಿ ತಾಯಾರ್ ಗುಡಿಯ ಗೋಡೆಯಲ್ಲಿದೆ. ಕನ್ನಡದ ಮತ್ತೊಂದು ಶಾಸನ ಕ್ರಿ.ಶ. ೧೫೪೯ ರ ಕಾಲದ್ದು. ಕ್ರಿ.ಶ. ೧೫೨೩ ರ ಸ್ವಭಾನು ಸಂವತ್ಸರದ ಒಂದು ಶಾಸನ ಸಂಸ್ಕೃತದಲ್ಲಿದೆ. ಇದು ಸಂಸ್ಕೃತ ವೇದ ಹಾಗೂ ದ್ರಾವಿಡ ಪ್ರಬಂಧಗಳ ಪಠಣಕ್ಕಾಗಿ ಕೊಡಮಾಡಿದ ಅನುದಾನ ಶಾಸನವಾಗಿದೆ. ಒಟ್ಟಿನಲ್ಲಿ ಬಹುಮಟ್ಟಿಗಿನ ಶಾಸನಗಳೆಲ್ಲ ಕೃಷ್ಣದೇವರಾಯ ಮಹಾರಾಯನ ಕಾಲದ್ದೇ ಆಗಿವೆ ಎಂಬುದನ್ನು ಗಮನಿಸಬಹುದು. ಆ ಮೂಲಕವಾಗಿಯೇ ಆತನ ಭಕ್ತಿ, ವ್ಯಾಪ್ತಿಯನ್ನೂ (ಆತ ವಿಜಯವಾಡದ ಬಳಿಯ ಶ್ರೀಕೂರ್ಮದ ನಾರಾಯಣನಿಗೂ ತಿರುಮಲೆಯ ಶ್ರೀನಿವಾಸನಿಗೂ ನಡೆದುಕೊಂಡ ಭಕ್ತ ಕವಿ ಸಾಮ್ರಾಟ.) ಗುರುತಿಸಬಹುದು.

ಮದರಾಸು ಸಂಸ್ಥಾನದಿಂದ ಬೇರೆಯಾದ ಮೇಲೆ ಧರ್ಮದರ್ಶಿಗಳಿಂದ ನೋಡಿಕೊಳ್ಳಲ್ಪಡುತ್ತಿದ್ದ ನಾಗುಲಾಪುರದ ಶ್ರೀ ವೇದನಾರಾಯಣ ಸ್ವಾಮಿ ದೇವಾಲಯ ೧೯೬೭ ರ ಏಪ್ರಿಲ್ ೨೯ ರಿಂದ ತಿ.ತಿ.ದೇ. ಆಡಳಿತಕ್ಕೆ ಒಳಪಟ್ಟು ಜೀರ್ಣೋದ್ಧಾರವಾಯಿತು. ೧೯೭೬ ರಲ್ಲಿ ಇಲ್ಲಿನ ಧ್ವಜಸ್ತಂಭವನ್ನು ಬದಲಾಯಿಸಲಾಯಿತು. (ಸಾಧಾರ)

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ :--

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ. 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ; ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.

# ಅರುಣಾಚಲದ ಅರುಣ-ರಮಣ

ಗುರುನಾಥ ಇನಾಮದಾರ

ಭೌತಿಕ ವಸ್ತು -- ವಿಷಯಗಳಿಂದ ಶಾಶ್ವತ ಸುಖನ್ನು ಅರಸುತ್ತಿರುವ ಮನುಷ್ಯ ಮರುಳುಗಾಡಿಲ್ಲಿ ನೀರಡಿಸಿದ ಪ್ರಾಣಿ ಮರೀಚಿಕೆಯ ದೆನ್ನು ಹತ್ತಿಂತಾಗಿದೆ. ನಿಜವಾದ ಶಾಶ್ವತ ಸುಖವು ನಶ್ವರಾದ ಈ ಪ್ರಪಂಚದ ವಸ್ತು -- ವಿಷಯಗಳಲ್ಲಿರದೇ ಶಾಶ್ವತ ಸಚ್ಚಿದಾನಂದ ಮೂರ್ತಿಯಾದ ಗವಂತನಲ್ಲಿರುತ್ತದೆ. ಆ ಸುಖದ ಅನ್ವೇಷಣೆಯನ್ನು ಮನಸ್ಸಿನ ಚಂಚಲತೆಯನ್ನು ಕಳೆದು, ಏಕಾತೆಯಿಂದ ಅಂತರ್ಮುಖಿಯಾಗಿ ಆತ್ಮಸ್ವರೂಪದ ಾಕ್ಷಾತ್ಕಾರಪಡೆಯುವುದರ ಮೂಲಕ ಮಾಡಬಹುದಾಗಿದೆ. ಇದಕ್ಕಾಗಿ ವಿಷಯ ರತಿಯನ್ನು ಡುವ ವಿರತಿಯೇ ಮೊದಲ ಹೆಜ್ಜೆಯಾಗಿದೆಯೆಂಬುದನ್ನು ಪ್ರತ್ಯಕ್ಷವಾಗಿ ತಮ್ಮ ಜೀವನ ಆಚರಣೆಯ ಮೂಲಕ ಜಗತ್ತಿಗೆ ತೋರಿಸಿಕೊಟ್ಟ ಮಹರ್ಷಿಗಳು ರಮಣರು.

ರಮಣರ ಮೊದಲ ಹೆಸರು ವೆಂಕಟರಮಣ ಎಂದು. ತಮಿಳುನಾಡಿನ ತಿರುಚ್ಚುಳ್ಳಿ ಎಂಬ ಗ್ರಾಮದಲ್ಲಿದ್ದ ಸುಂದರಮ್ ಅಯ್ಯರ್ ಮತ್ತು ಅವರ ಹೆಂಡತಿ ಅಲಗಮ್ಮಾಳ್‌ರವರ ಹೊಟ್ಟೆಯಿಂದ ಎರಡನೇ ಮಗುವಾಗಿ ವೆಂಕಟರಮಣನು ಕ್ರಿ. ಶ. ೧೮೭೯ ಡಿಸೆಂಬರ್ ಮೂವತ್ತರಂದು ಅಂದರೆ ಪ್ರಮಾಥಿನಾಮ ಸಂವತ್ಸರದ ಮಾರ್ಗಶೀರ್ಷ ಬಹುಳ ಪಾಡ್ಯ ಸೋಮವಾರದಂದು ಜನಿಸಿದರು. ಮಹಾತ್ಮರು ಜನಿಸಿದ ದಿನವೇ ಪರ್ವದಿನವೆಂಬಂತೆ ಅಂದು ದಕ್ಷಿಣ ಭಾರತದೆಲ್ಲೆಲ್ಲ, ತುಂಬ ಭಕ್ತಿ -- ಶ್ರದ್ಧೆಯಿಂದ ಆಚರಿಸುವ 'ರುದ್ರದರ್ಶನ' ದಿನವಾಗಿತ್ತು. ತಿರುಚ್ಚುಳ್ಳಿಯ ಜನರು ಅಂದು ಬೆಳಿಗ್ಗೆ ಸ್ನಾನ ಮಾಡಿ ಭಗವಾನ್ ಶಂಕರ -- ನಟರಾಜನ ಪೂಜೆಗೆ ಧಾವಿಸುತ್ತಿದ್ದಾರೆ. ಸುಂದರಮ್ ಅಯ್ಯರ್ ಮನೆಯಲ್ಲಿ ಪ್ರತ್ಯಕ್ಷ ಭಗವಂತನ ಅವತಾರಕ್ಕಾಗಿ ಸಿದ್ಧತೆ ನಡೆದಿತ್ತು!

ಮಹಾತ್ಮರ ಜನನ ಪುಣ್ಯದಂಪತಿಗಳ ಹೊಟ್ಟೆಯಲ್ಲೇ ಆಗುವುದು ನಿಶ್ಚಿತ. ಸುಂದರಮ್ ಅಯ್ಯರರ ಮನೆತನ ಪ್ರತಿ ತಲೆಮಾರಿನಲ್ಲೂ ಒಬ್ಬ ಸಂನ್ಯಾಸಿಯಾಗಿ ಭಗವಂತನ ಸೇವೆ ಮಾಡುವ ಭಾಗ್ಯ ಪಡೆದುದು. ಸ್ವತಃ ಸುಂದರಮ್ ಅಯ್ಯರರು ಜನಕ ಮಹಾರಾಜನಂಥವರು. ತಮ್ಮ ವಕೀಲಿ ವೃತ್ತಿಯಿಂದ ಸಾಕಷ್ಟು ಸಂಪತ್ತುಗಳಿಸಿದ್ದರೂ ಅದರ ದಾಸರಾಗಲಿಲ್ಲ. ತಮ್ಮ ಸಂಪತ್ತು ಶ್ರೀಪತಿಯ ಸೇವೆಗೆ ಸಾಧನವೆಂದುಕೊಂಡರು. ಬಡ ಬಗ್ಗರ ಸೇವೆಮಾಡಿದರು.

ವೆಂಕಟರಮಣನು ಎಲ್ಲರಂತೆ ಶಾಲೆಗೆ ಸೇರಿದನೇನೋ ನಿಜ. ಆದರೆ ಎಲ್ಲರಂತೆ ಓದಲಿಲ್ಲ ಬರೆಯಲಿಲ್ಲ. ಬದಲಾಗಿ ಆಗಾಗ ಏನೋ ಧ್ಯಾನಿಸುತ್ತ ಕಣ್ಮುಚ್ಚಿ ಕುಳಿತು ಬಿಡುತ್ತಿದ್ದ. ಅಕ್ಕಪಕ್ಕದ ಹುಡುಗರು ಅದು ನಿದ್ದೆಯೆಂದು ತಿಳಿದು ಅವನನ್ನು ಚಿವುಟಿ, ಹೊಡೆದು ಎಬ್ಬಿಸುತ್ತಿದ್ದರು. ಶಾಲೆ ಬಿಟ್ಟೊಡನೆ ಊರ ಹೊರಗಿನ ದೆಟ್ಟಗುಡ್ಡಗಳಲ್ಲಿ ಅಲೆಯುವುದು ಅವನಿಗೆ ಪ್ರೀತಿಯ ವಿಷಯ. ಕೆಲವೊಮ್ಮೆ ರಾತ್ರಿಯನ್ನು ಚಳಿ -- ಮಳೆ -- ಗಾಳಿಗಳನ್ನು ಲೆಕ್ಕಿಸದೆ ಊರ ಹೊರಗಿನ ಗುಡ್ಡದಲ್ಲಿಯೇ ಕಳೆಯುತ್ತಿದ್ದ. ಈ ಬಾಲಕನ ಬಾಲ್ಯದ ಇನ್ನೊಂದು ಕೌತುಕವೆಂದರೆ ಕುಂಭಕರ್ಣನಂತಹ ನಿದ್ರೆ! ಆದರೆ ದೇರೆಯವರು 'ಗಾಢನಿದ್ರೆ'ಯೆಂದು ಭಾವಿಸಿದ್ದು, ವೆಂಕಟರಮಣನ ಆಧ್ಯಾತ್ಮಿಕ ಜೀವನದ ಪೂರ್ವಸಂಕೇತವಾಗಿತ್ತೆಂಬುದು ಬಹಳಷ್ಟು ಜನರಿಗೆ ತಿಳಿದಿರಲಿಲ್ಲ.

ಬಾಲಕ ವೆಂಕಟರಮಣನಿಗೆ ಅರುಣಾಚಲದ ಬಗ್ಗೆ ವಿಶೇಷ ಮೋಹ -- ಬಲು ಆಕರ್ಷಣೆ. ಕೇವಲ 'ಅರುಣಾಚಲ' ಎಂಬ ಹೆಸರು ಕೇಳುತ್ತಿದ್ದಂತೆಯೇ ಆತನ ಮನಸ್ಸು ಮುದಗೊಳ್ಳುತ್ತಿತ್ತು. ಅದನ್ನು ಕಾಣುವ ಕುತೂಹಲ ದಿನೇ ದಿನೇ ಹೆಚ್ಚಾಯಿತು. ಇದೇ ಸಮಯಕ್ಕೆ ಅವನ ಕೈಗೆ 'ಪೆರಿಯ ಪುರಾಣ' ಎಂಬ ೬೩ ಪುರಾತನ ಸಂತಶ್ರೇಷ್ಠರ ಜೀವನಕಥಾಪುಸ್ತಕವು ದೊರೆಯಿತು. ಒಂದೊಂದು ಕಥೆಯನ್ನೋದುತ್ತಿದ್ದಂತೆಯೇ ವಿರಕ್ತಿಯ ಭಾವ ಒಂದೊಂದೇ ಮೆಟ್ಟಿಲು ಮೇಲೇರತೊಡಗಿತು. ತಾನೂ ಕೂಡ ಅವರಂತೆಯೇ ವಿರಕ್ತನಾಗಬೇಕು. ಪರಮಾತ್ಮನ ಅನುಸಂಧಾನ ಪಡೆಯಬೇಕು ಎಂಬ ಭಾವ ಬೆಳೆದು ಅಂದಿನಿಂದ ಮೀನಾಕ್ಷಿ ದೇವಾಲಯದಲ್ಲಿ ಆಧ್ಯಾತ್ಮ ಚಿಂತನೆ ನಡೆಸಿದ. ಅದೊಂದು ದಿನ ವೆಂಕಟರಮಣ ಚಿಕ್ಕಪ್ಪನ ಮನೆಯಲ್ಲಿ ಕುಳಿತಾಗ ತಾನು ಸತ್ತ ಅನುಭವವಾಯಿತು. ಸತ್ತುಬಿದ್ದದೇಹ ಮುಂದೇನಾಗುವುದೆಂಬುದನ್ನು ಸ್ವತಃ ತಾನು ಆ ದೇಹದಿಂದ ಹೊರಗಡೆ ನಿಂತು ನೋಡುವಂಥ ಅಪೂರ್ವ ಅನುಭವ! ಸತ್ತ ದೇಹವನ್ನು ಸುಡುತ್ತಾರೆ. **ದೇಹ**





# ಶ್ರೀ ವೇಂಕಟಗಿರಿಯ ಮಹಿಮೆ

ಸಪ್ತಗಿರಿ ಇದು ಸುಪ್ತಗಿರಿ ಅದು
ಮನುಜ ಬುದ್ಧಿವಿಕಾಸಕೆ ಪ

ಸಪ್ತಗಿರಿಯಲ್ಲಿಹುದು ಅದು
ವೇಂಕಟಪ್ಪನ ಮನೆಯದು
ವೈಕುಂಠಕೆ ಸಮವದು
ಕಣಜವದು ಹಣದ ಹೊಳೆ
ಆಭರಣಗಳ ಮಡುವದು
ಭಕ್ತರು ತೋರಿದ ಭಕ್ತಿ ಅದು
ಅವನ ವಾಸದ ಪರ್ವತಾವಳಿ
ಸೃಷ್ಟಿಸೊಬಗಿನ ತವರದು
ಮನವ ಸೆಳೆಯುತಲಿರುವುದು ೧

ಗುಡಿಯ ಗೋಪುರ ಗಗನ ಚುಂಬನ
ಗಂಟೆನಾದವು ಹೃದಯ ಚುಂಬನ
ಮಂತ್ರ ಘೋಷವು ಮನದ ಚುಂಬನ
ವಾಹನೋತ್ಸವ ನಯನ ಚುಂಬನ
ಪುಷ್ಕರಿಣಿಯ ಜಲ ದೇಹ ಚುಂಬನ
ಪಾಪನಾಶಿನಿ ಜಲದ ಧಾರೆಯು
ಜನುಮ ಪಾವನ ಮಾಡಲು
ಗುಪ್ತ ಗಂಗೆ ಎನುವರು ೨

ಶ್ರೀನಿವಾಸನ ಗುಡಿಯ ದಾರಿಯು
ಏಳು ಗಿರಿಗಳ ಸಾಲದು
ಅವನ ದರುಶನ ದಾರಿಯು
ಏಳು ಮನೆಗಳ ಸಾಲದು
ಅವನ ಕರುಣೆಯ ಕಿರಣ ಕಾಣಲು
ಏಳು ಜನ್ಮವು ಸಾಲವು
ಗೋವಿಂದ ಗೋವಿಂದ ನಾದಲಹರಿ
ಪಾವನ ಗಂಗೆಯ ಕಾಣಿರಿ
ಉಡುಪಿನಾಥನೆ ತಿರುಮಲೇಶನಾಗಿ
ಇಲ್ಲಿ ನಿಂದಿಹ ನೋಡಿರಿ ೩

**ಶ್ರೀಮತಿ ಸ. ನ. ಕಟ್ಟಿ.**

ಸುಟ್ಟರೂ ನಾನು ಹೀಗೆ ಇರಬಹುದು. ಸುಟ್ಟು ಭಸ್ಮವಾಗುವ ದೇಹ ನಾನಲ್ಲ. ಸಾವು ಇಲ್ಲದ ಈ ಆತ್ಮವೇ 'ನಾನು' ಎಂಬ ಅಲೌಕಿಕವಾದ ಅನುಭವವೊಂದು ಕೆಲವೇ ಕ್ಷಣಗಳಲ್ಲಿ ಮಿಂಚಿ ಮಾಯವಾಯಿತು. ಆ ಕ್ಷಣವೇ ಅವನ ದೇಹಾಭಿಮಾನವು ಕಳಚಿ, ಆತ್ಮದ ಅರಿವು ಆವರಿಸಿತು. ಆ ಅರಿವಿನ ಅನುಭವ ಅಮೃತಕ್ಕಿಂತಲೂ ಸವಿಯಾದುದರಿಂದ ಅದರಲ್ಲೇ ರಮಿಸತೊಡಗಿದ ರಮಣನನ್ನು ಕಂಡು ಕೆಲವರು 'ಮಹಾಯೋಗಿ' 'ಅರೆಹುಚ್ಚ' ಎಂದೆಲ್ಲ ಹಾಸ್ಯಮಾಡಿ ನಕ್ಕರು. ಸ್ವತಃ ಅಣ್ಣನೂ ಕೂಡ "ಈ ಢೋಂಗಿ ಯೋಗಿತನವನ್ನು ಸಾಕುಮಾಡು. ನೀನು ಯೋಗಿಯೇ ಆಗುವುದಿದ್ದಾರೆ ಮನೆಯಲ್ಲೇನು ಕೆಲಸ? ಕಾಡುಸೇರು ಹೋಗು" ಎಂದು ಗದರಿಸಿದ. ಅದು ಅಣ್ಣ ತನ್ನನ್ನು ಬಯ್ದುದಲ್ಲ, ಸರಿಯಾದ ಮಾರ್ಗ ತೋರಿಸಿದ ಎಂದುಕೊಂಡ ವೆಂಕಟರಮಣ. ಮರುದಿನವೇ ತಿರುಮಣ್ಣಾಮಲೆಗೆ ಹೊರಟ! ಅವನ ಈ ಪ್ರವಾಸಕ್ಕಾಗಿ ಅವನ ಅಣ್ಣನೇ ತನಗರಿವಿಲ್ಲದಂತೆ ಐದು ರೂಪಾಯಿಗಳನ್ನು ಕೊಟ್ಟಾಗ ವೆಂಕಟರಮಣನಿಗೆ ದೇವರ ಅನುಗ್ರಹ ದೊರೆತಂತಾಯಿತು. ನೂರೆಂಟು ರೀತಿಯ ಕಷ್ಟ -- ನಷ್ಟಗಳನ್ನು ಸಹಿಸಿಯೂ ಕೂಡ ಕೊನೆಗೆ ತಿರುಮಣ್ಣಾಮಲೆ ತಲುಪಿದಾಗ, ಪ್ರೇಮ, ಮತ್ತು ಭಕ್ತಿಯಿಂದ ತಳಮಳಿಸುತ್ತಿದ್ದ ವೆಂಕಟರಮಣ ಓಡೋಡುತ್ತಲೇ, ದೇವಸ್ಥಾನಕ್ಕೆ ಬಂದು, ಅರುಣಾಚಲೇಶ್ವರನೆದುರಿಗೆ ಭಾವಾವಿಷ್ಟನಾಗಿ, ಕೈಮುಗಿದು ನಿಂತ. ಪರಮಾತ್ಮನ ಪರಮದರ್ಶನದ 'ಪರಮಾನಂದ'ದಲ್ಲಿ ಅದೆಷ್ಟು ಹೊತ್ತು ರಮಿಸಿದರೂ ಆ ವೆಂಕಟರಮಣನಿಗೆ ತೃಪ್ತಿಯಿಲ್ಲ. ಆತ್ಮಾನಂದದ ಅನುಭವದಲ್ಲಿ ಮಿಂದು ಧನ್ಯತೆಯ ಭಾವ ಪಡೆದ.

ದೇವದರ್ಶನದ ನಂತರ ದೇವಸ್ಥಾನದಿಂದ ಹೊರಬಂದ ವೆಂಕಟರಮಣನಿಗೆ ಮತ್ತೊಮ್ಮೆ ದೇವಸ್ಥಾನವನ್ನು ಪ್ರವೇಶಿಸಬೇಕಾದ ಪ್ರಮೇಯವೇ ಬರಲಿಲ್ಲ. ಅರುಣಾಚಲೇಶ್ವರನಲ್ಲಿ ಏಕರೂಪನಾದ ಮೇಲೆ ದೇವಸ್ಥಾನದ ಒಳಗಿದ್ದರೇನು? ಹೊರಗಿದ್ದರೇನು? ಈ ಮಿಥ್ಯಾಪ್ರಪಂಚದ ಮಾಯೆಯ ಜಾಲದಿಂದ ಹೊರಬಿದ್ದ ವೆಂಕಟರಮಣ ಆತ್ಮಾನಂದದ ಗಾಢಾರಣ್ಯದಲ್ಲಿ ಆತ್ಮ ವಿಮೋಧನಾಗಿ ಕುಳಿತುಬಿಟ್ಟನು. ದೇಹಕ್ಕೆ ತಾಗಿದ ಚಳಿ ಮಳೆ, ಗಾಳಿಗಳು ಅವನ ಆತ್ಮಾನಂದವನ್ನು ಕದಡಲಿಲ್ಲ. ಕದಲಿಸಲಿಲ್ಲ. ಅವನು ಕುಳಿತಲ್ಲಿ ಇರುವೆ -- ಗೆದ್ದಲುಗಳು ತುಂಬಿ ಅವನ ರಕ್ತ ಹೀರಿದವು. ಆದರೂ ಮೈಮೇಲೆ ಎಚ್ಚರವಿಲ್ಲ. ನೋವಿನ ನರಳಾಟವಿಲ್ಲ. ಆತ್ಮಾನಂದದ ಅಮಲಿನಲ್ಲಿದ್ದವರಿಗೆ ದೇಹದ ಕಷ್ಟ -- ನಷ್ಟಗಳಿಂದೇನಾಗಬೇಕಾಗಿದೆ? ಆದರೆ ಅವರ ಈ ಸ್ಥಿತಿ ಕಂಡ ಕೆಲವರು ಅವರನ್ನು ಅಲ್ಲಿಂದ ಗೋಪುರ ಸುಬ್ರಮಣ್ಯಸ್ವಾಮಿಯ ಮಂದಿರಕ್ಕೆ ಕರೆತಂದರು. ಅಲ್ಲಿಯೂ ಕೆಲ ದುಷ್ಟತರುಣರು ಇವರನ್ನು ಪೀಡಿಸತೊಡಗಿದಾಗ ಅಲ್ಲಿಯ ಪೂಜಾರಿಗಳು ದೇವಸ್ಥಾನದ ವಾಹನ ಮಂಟಪಕ್ಕೆ ಕರೆತಂದರು. ರಮಣರು ಅಲ್ಲಿಂದ ಮುಂದೆ ಶಿವಗಂಗಾತೀರ್ಥದ ಪಕ್ಕದಲ್ಲಿದ್ದ ಬಿಲ್ವವೃಕ್ಷದಡಿಯಲ್ಲಿ, ನಂತರ ಮುಂಗೈ ಪಿಳ್ಳೈಯಾರ್ ಮಂದಿರದಲ್ಲಿ ತಪಸ್ಸು ಗೈದರು. ಸದಾವಕಾಲವೂ ಸಚ್ಚಿದಾನಂದ ಸ್ವರೂಪದ ಆತ್ಮಾನಂದದಲ್ಲಿಯೇ ಇರುತ್ತಿದ್ದ ಇವರ ಸೇವೆ ಮಾಡಲು ಹಲವು ಜನರು ಶಿಷ್ಯರಾಗಿ ಬಂದರು.

ಹಲವು ವರ್ಷಗಳ ಮೌನ ಸಾಧನೆಯ ನಂತರ ಶ್ರೀರಮಣರು ಅರುಣಾಚಲ ಗಿರಿಯ ಮೇಲೆ ಇರಲು ಬಯಸಿ, ಅಲ್ಲಿದ್ದ ವಿರುಪಾಕ್ಷ ಗುಹೆಯಲ್ಲಿ ವಾಸಿಸತೊಡಗಿದರು. ಇದರ ಆಕೃತಿಯು 'ಓಂ'ಕಾರದಂತಿದ್ದು, ಅರುಣಾಚಲೇಶ್ವರರ ಮಂದಿರದ ಪಶ್ಚಿಮ ದಿಕ್ಕಿನಲ್ಲಿದೆ. ಇದರ ನಾಲ್ಕು ನಿಟ್ಟಿನಲ್ಲಿ ಅನುಪಮ ಪ್ರಕೃತಿ ಸೌಂದರ್ಯ ತುಂಬಿತುಳುಕುತ್ತಿದ್ದು, ಸಾಧಕರ ಸಾಧನೆ, ಧ್ಯಾನಾದಿಗಳಿಗೆ ಪ್ರಶಾಂತವಾತಾವರಣವು ಇಲ್ಲಿದೆ. ಈ ಸ್ಥಳದಿಂದ ಉತ್ತರದಲ್ಲಿ 'ಆಮ್ರಗುಹೆ' ಯಿದ್ದು, ಅಲ್ಲಿ ಸಿಹಿನೀರಿನ ಝರಿಯಿದೆ. ಅಲ್ಲಿಂದ ಮುಂದೆ 'ಸ್ಕಂದಗುಹೆ'ಯಿದೆ. ಅಲ್ಲಿ ಮಾವು -- ತೆಂಗುಗಳಿಂದ ಸುಶೋಭಿತವಾದ ಚಿಕ್ಕ ತೋಟವೂ ಇದೆ. ಶ್ರೀರಮಣರಿಗೆ ಈ ಸ್ಥಳಗಳು ತುಂಬ ಹಿಡಿಸಿದವು. ಇಲ್ಲಿಯೇ ನೆಲೆಯಾಗಿ ನಿಂತರು.

ಶ್ರೀರಮಣ ಮಹರ್ಷಿಗಳಿಗೆ ಅರುಣಾಚಲದ ಪ್ರದಕ್ಷಿಣೆಯೆಂದರೆ ತುಂಬ ಸಂತೋಷ. ಕೈಯಲ್ಲಿ ಕೋಲು ಹಿಡಿದು ಪ್ರತಿನಿತ್ಯ ಅರುಣಾಚಲದ ಪ್ರದಕ್ಷಿಣೆ ಹಾಕುತ್ತಿದ್ದರು. ಪ್ರಥಮ ಬಾರಿ ಪ್ರದಕ್ಷಿಣೆ ಹಾಕುವಾಗ ಅವರು 'ಅಕ್ಷರಮಣಿ ಮಾಲೈ' ಎಂಬ ೧೦೮ ಶ್ಲೋಕಗಳ ಭಕ್ತಿರಸ ಪೂರ್ಣವಾದ ತಮಿಳು ಪದ್ಯ ರಚಿಸಿದರು. ಇದೇ ಅವರ ಪ್ರಥಮ ಭಕ್ತಿ ಕುಸುಮಾಂಜಲಿಯಾಯಿತು.

ಶ್ರೀರಮಣರು 'ಸಕಲ ಜೀವಾತ್ಮಗಳಿಗೂ ಲೇಸನ್ನೆ ಬಯಸುವವ'ರಾಗಿದ್ದರು. ಅರುಣಾಚಲದಲ್ಲಿದ್ದ ವನ್ಯಪ್ರಾಣಿಗಳೆಲ್ಲವೂ ಈ ಅವತಾರಿಯ ಅಡಿಯ ಆಶ್ರಯ ಪಡೆದು ಪರಸ್ಪರ ವೈರತ್ವ ಮರೆತು ಪ್ರೀತಿಯ ಸಹಬಾಳ್ವೆ ನಡೆಸುತ್ತಿದ್ದವು. ವಿಶ್ವಕುಟುಂಬಿಯಾದ ರಮಣರಿಗೆ ಮಾನವ ನಷ್ಟೇ ಈ ಕಾಡು ಪ್ರಾಣಿಗಳೂ ಕೂಡ ಪ್ರಿಯವಾಗಿದ್ದವು.

ಅವತಾರಿ ಪುರುಷರು ಚುಂಬಕವಿದ್ದಂತೆ. ಅವರಿದ್ದಲ್ಲಿ ಭಕ್ತರ ಗುಂಪೇ ನೆರೆಯುತ್ತದೆ. ಅವರ ವಚನಾಮೃತ ಸವಿಯಲು ಹಾತೊರೆಯುವ ಜನರು ದೂರದೂರದಿಂದ ಬರುತ್ತಾರೆ. ಶ್ರೀರಮಣರ ವಿಷಯದಲ್ಲೂ ಹೀಗೆಯೇ ಆಯಿತು. ಪಂಡಿತ ಪಾಮರರು. ಶ್ರೀಮಂತ -- ಬಡವರು, ಸ್ತ್ರೀ -- ಪುರುಷರು -- ಹಿರಿಯರು -- ಎಳೆಯರು -- ಹೀಗೆ ಸಹಸ್ರಾರು ಭಕ್ತರು ಶ್ರೀರಮಣರ ಅನುಗ್ರಹಕ್ಕಾಗಿ ಬರತೊಡಗಿದರು. ಅಪಾರ ಸಂಪತ್ತಿನ ಒಡತಿಯಾಗಿದ್ದ 'ಲಕ್ಷ್ಮೀ ಅಮ್ಮಾಳ್' ಶ್ರೀಗಳ ಕೃಪಾಕಟಾಕ್ಷದಿಂದ ಪುನೀತಳಾಗಿ ಆಶ್ರಮದಲ್ಲೇ ನೆಲೆಸಿ ಬರುವ ಭಕ್ತರಿಗೆಲ್ಲ ಕರುಣಾಮಯಿಯಾದ 'ಅಚ್ಚಮ್ಮಾಳ್' ತಾಯಿಯಾದಳು. ಸಂಸ್ಕೃತ ಪಂಡಿತರೂ, ವೇದವಿದ್ಯಾಶಾಸ್ತ್ರ ವಿಶಾರದರೂ ಆದ ಗಣಪತಿಶಾಸ್ತ್ರಿಗಳು ಶ್ರೀರಮಣರ ಶಿಷ್ಯರಾದರು. ಶ್ರೀಗಳ ಉಪದೇಶಕೇಳಿ ಧನ್ಯರಾಗಿ ಅವರನ್ನು 'ಶ್ರೀರಮಣ'ರೆಂದು 'ಭಗವಾನ್' 'ಮಹರ್ಷಿ'ಗಳೆಂದು ಕರೆದು 'ರಮಣಗೀತಾ' ಎಂಬ ಪುಸ್ತಕ ರಚಿಸಿ, ರಮಣ ಭಕ್ತರ ಮನ್ನಣೆಗೆ ಪಾತ್ರರಾದರು.

ಭಕ್ತರ ಸಂಖ್ಯೆ ಬೆಳೆದಂತೆಲ್ಲ ಶ್ರೀರಮಣರಿಗೆ ಬಿಡುವಿಲ್ಲದಂತಾಯಿತು. ಬರುವವರೆಲ್ಲ ತಮ್ಮ ಕಷ್ಟ -- ಕೋಟಲೆಗಳನ್ನು ಹೇಳಿಕೊಂಡು, ಅವರಿಂದ ಸಮಾಧಾನ ಬಯಸುವವರೇ. ಆದರೆ ಭಗವಾನರಿಗೆ ಅತೀ ಮಾತು ಹಿಡಿಸದು. ಜಿಜ್ಞಾಸುಗಳಿಗೆ ಸಂಕ್ಷಿಪ್ತ ಉತ್ತರ ನೀಡುತ್ತಿದ್ದರು. ಅದೇ ಅವರ ವೈಶಿಷ್ಟ್ಯವೂ ಆಗಿತ್ತು. ಎಷ್ಟೋ ವೇಳೆ ಗುರುಗಳ ಮೌನವೇ ಶಿಷ್ಯರ ಸಂಶಯಗಳನ್ನು ನಿವಾರಿಸಿದ್ದುಂಟು! ಶ್ರೀರಮಣರು ತಮ್ಮ ಶಿಷ್ಯರೊಂದಿಗೆ ನಡೆಸಿದ ಪ್ರಶ್ನೋತ್ತರಗಳನ್ನು, ಸಂಭಾಷಣೆಗಳನ್ನು ಬಳಿಯಲ್ಲಿದ್ದ ಕೆಲವು ಶಿಷ್ಯರು ಬರೆದಿಟ್ಟುಕೊಂಡು ಅನಂತರ 'ಸದ್ದರ್ಶನ', 'ಅರುಣಾಚಲಾಷ್ಟಕ', 'ಇರುವಿಕೆ', 'ಮಹರ್ಷಿ -- ಪ್ರವಚನ' ಎಂಬಿತ್ಯಾದಿ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಈ ದೇಹರೂಪಿ ಮಿಥ್ಯಾ 'ನಾನು' ಎಂಬ ಅಹಂಕಾರ ಅಳಿದಾಗ ಆತ್ಮರೂಪಿ 'ನಾನು' ಎಂಬ ಸೂರ್ಯ ತಾನೇ ತಾನಾಗಿ ಪ್ರಜ್ವಲಿಸುತ್ತಾನೆ. ಇದೇ ಆತ್ಮಾನುಭವ, ಇದೇ ಜೀವನ್ಮುಕ್ತಿ -- ಇದೇ ರಮಣರ ತತ್ತ್ವಜ್ಞಾನದ ನೇರವೂ ನಿಕಟವೂ ಆದ ಮಾರ್ಗ ವೆನ್ನಬಹುದು.

ಸ್ವತಃ ಜ್ಞಾನರೂಪಿಗಳೂ, ಜೀವನ್ಮುಕ್ತರೂ ಆಗಿದ್ದ ಶ್ರೀರಮಣರ ಬಳಿ ಅಹಂಕಾರದ ಸುಳಿವೇ ಇರಲಿಲ್ಲ. ಆಶ್ರಮದಲ್ಲಿ ತಮ್ಮ ಶಿಷ್ಯರೊಂದಿಗೆ ಗಿಡಗಳಿಗೆ ನೀರೆರೆಯುತ್ತಿರುವುದನ್ನು ಕಂಡ ಅನೇಕರ ಮನಸ್ಸಿನಲ್ಲಿ 'ಇವರೆಂಥ ಭಗವಾನರು' ಎಂಬ ಸಂಶಯ ಮೊಳೆಯುತ್ತಿತ್ತು. ಆದರೆ ಅವರ ಕೃಪಾದೃಷ್ಟಿ ತಾಗಿದಾಗ ಆ ಸಂಶಯವು ಅಳಿದು ಸಮಾಧಾನ ತಾನೇ ತಾನಾಗಿ ಮೂಡುತ್ತಿತ್ತು. ಶ್ರೀರಮಣರ ದೃಷ್ಟಿಯಲ್ಲಿ ಯಾರೂ ಕೀಳಲ್ಲ. ಎಲ್ಲರೂ ಆತ್ಮಸ್ವರೂಪಿಗಳೇ. ಒಮ್ಮೆ ಆಶ್ರಮದ ಬಾಗಿಲಬಳಿ ಭಿಕ್ಷುಕನೊಬ್ಬ ನಿಂತು "ಏನಾದರೂ ತಿನ್ನಲು ಕೊಡಿ" ಎಂದು ಅಂಗಲಾಚುತ್ತಿದ್ದಾಗ ಅಜ್ಞಾನಿಯಾದ ಶಿಷ್ಯನೊಬ್ಬ "ನಮ್ಮೆಲ್ಲರ ಊಟವಾದ ಮೇಲೆ ಬಾ" ಎಂದು ಗದರಿಸಿ ಕಳಿಸಿದನು. ಇದನ್ನರಿತ ರಮಣರು ಅಂದು ಊಟಕ್ಕೆ ಬರದೇ ತಮ್ಮ ಕೋಣೆಯಲ್ಲೇ ಕುಳಿತರು. ಕರೆಯಲು ಬಂದ ಹಿರಿಯ ಸಾಧಕರಿಗೆ "ಈ ಪರದೇಶಿ ನಿಮ್ಮೆಲ್ಲರ ಊಟವಾದ ಮೇಲೆ ಬರುತ್ತಾನೆ" ಎಂದು ಹೇಳಿಕಳಿಸಿದರು. ಭಿಕ್ಷುಕನನ್ನು ಹೀಯಾಳಿಸಿ ನುಡಿದುದು ತಪ್ಪೆಂಬುದು ಆಶ್ರಮವಾಸಿಗಳಿಗೆ ಅರಿವಾಯಿತು. ಅವರು ಕ್ಷಮೆ ಕೋರಿದರು. ಅಂದಿನಿಂದ ಆಶ್ರಮದ ಹೊರಗಡೆಯ ಭಿಕ್ಷುಕರಿಗೇ ಮೊದಲು ಊಟ, ಅನಂತರ ಆಶ್ರಮದವರು ಊಟ ಮಾಡುವ ಪರಿಪಾಠ ಬೆಳೆದುಬಂದಿದೆ.

ರಮಣ ಮಹರ್ಷಿಗಳು ಪವಾಡ ಪ್ರಿಯರಲ್ಲ. ಪವಾಡಗಳಿಂದ ಜನರನ್ನು ಮರುಳುಗೊಳಿಸುವ ಮಾರ್ಗವೂ ಅವರದಾಗಿರಲಿಲ್ಲ. ಆದರೂ ಜನರು ಅವರ ಕೃಪಾಶೀರ್ವಾದ ಬಯಸಿ ತಂಡೋಪತಂಡವಾಗಿ ಬಂದರು. ಬಂದವರಲ್ಲಿ ಕೆಲವರು ಅಲ್ಲೇ ನೆಲಸಿ ಗುರುವಿನ ಸೇವೆ ಮಾಡಿ ಆತ್ಮಕಲ್ಯಾಣ ಸಾಧಿಸಿದರು. ಈ ರೀತಿ ರಮಣರ ಶಿಷ್ಯರಾಗಿ ಸೇವೆ ಮಾಡಿದವರಲ್ಲಿ ಕೇವಲ ಭಾರತೀಯರಷ್ಟೇ ಅಲ್ಲ, ಕೇವಲ ಲೌಕಿಕ ವಿಚಾರ, ಭೌತಿಕ ಸುಖಗಳಿಂದ ತುಂಬಿಹೋದ ಪಾಶ್ಚಾತ್ಯ ರಾಷ್ಟ್ರಗಳಿಂದ ಬಂದವರೂ ಇದ್ದಾರೆ. ಅಂಥವರಲ್ಲಿ ಹೆಚ್. ಹಂಫ್ರೀಜ್, ಫ್ರೆಡ್ರಿಕ್ ಫ್ಲೆಚರ್, ಹೇರಿ ಡಿಕ್‌ಮನ್, ಪಾಲ್ ಬ್ರಂಟನ್, ರಾಫೆಲ್ ಹರ್ಸ್ಟ್, ಆರ್ಥರ್ ಆಸ್‌ಬೋರ್ನ್, ಶ್ರೀಮತಿ ಓಲ್ಗಾ ಫ್ಲಾಬ್ ಕೇಪಕಿನ್' ಮುಂತಾದವರೆಲ್ಲ ಪ್ರಸಿದ್ಧರು. ರಾಜೇಂದ್ರಪ್ರಸಾದ, ಸರೋಜಿನಿನಾಯ್ಡು, ಹೃಷೀಕೇಶದ ಸ್ವಾಮಿ ಶಿವಾನಂದರಂಥವರು ರಮಣರ ಸನ್ನಿಧಿಯಲ್ಲಿದ್ದರು. ಮುರುಗನಾರ್ ಎಂಬ ತಮಿಳು ಮಹಾಕವಿಗಳು ರಮಣರ ತತ್ತ್ವವಿಚಾರ ಬಿಟ್ಟು ಬೇರೆ ಪದ್ಯ ಬರೆಯುವುದಿಲ್ಲವೆಂದು ಪ್ರತಿಜ್ಞೆ ಮಾಡಿ, ತಮ್ಮ ಜೀವನಪರ್ಯಂತ ಹಾಗೆಯೇ ನಡೆದುಕೊಂಡರು. ನಮ್ಮ -- ನಿಮ್ಮಂಥ ಸಾಮಾನ್ಯರು ಲಕ್ಷಗಟ್ಟಲೇ ಜನರು ಶ್ರೀರಮಣರ ದಿವ್ಯ ಕಟಾಕ್ಷ ಮಾತ್ರದಿಂದಲೇ ಜನ್ಮಜನ್ಮಾಂತರದ ಪಾಪಕಳೆದುಕೊಂಡು, ಅಲೌಕಿಕವಾದ ಸಮಾಧಾನ ಪಡೆದಿದ್ದಾರೆ!

ಸರ್ವಶಕ್ತರಾದ ರಮಣರು ತಮ್ಮ ಕರ್ಮದಿಂದ ತಮ್ಮ ದೇಹವು ಅನುಭವಿಸಬೇಕಾದ ನೋವನ್ನು ಮೌನವಾಗಿಯೇ ಸಹಿಸಿಕೊಂಡು ಅನುಭವಿಸಿದರು. ೧೯೪೯ ರಲ್ಲಿ ಎಡದ ಮೊಳಕೈ ಕೆಳಗೊಂದು ಗಂಟಾಗಿ ಅದು ವಿಪರೀತವಾಗಿ ನೋವುಂಟುಮಾಡುತ್ತಿದ್ದರೂ ರಮಣರು ಅದರತ್ತ ಲಕ್ಷ್ಯಗೊಡಲಿಲ್ಲ. ಆದರೆ ಅದರಿಂದಾಗಿ ಅವರ ಪ್ರಕೃತಿ ಮಾತ್ರ ದಿನೇ ದಿನೇ ಕ್ಷಮಿಸತೊಡಗಿತು. ಅವರಿಗಾದ ಆ ಗಂಟು ಅಸಾಮಾನ್ಯವಾದ ಕ್ಯಾನ್ಸರ್ ಆಗಿತ್ತು. ವೈದ್ಯರು ಅದನ್ನು ಶಸ್ತ್ರಕ್ರಿಯೆಯ ಮೂಲಕ ತೆಗೆಯಬೇಕೆಂದರು. ಅದರಂತೆ ಶಸ್ತ್ರಕ್ರಿಯೆಯಾದರೂ ಅದರ ನಿಯಂತ್ರಣವಾಗಲಿಲ್ಲ. ವೈದ್ಯರು ಇಡೀ ಕೈಯನ್ನೇ ತೆಗೆಯಬೇಕೆಂದರು. ರಮಣರು ಅದನ್ನು ಕೇಳಿ "ಈ ಶರೀರವೇ ಒಂದು ರೋಗವಾಗಿರುವಾಗ ಈ ಚಿಕ್ಕರೋಗಕ್ಕೆ ಕಳವಳವೇಕೆ?" ಎಂದು ಹೇಳಿದರು. ಅವರು ರೋಗಶಯ್ಯೆಯಲ್ಲಿದ್ದಾಗಲೇ ಭಕ್ತರು ಅವರ ಎಪ್ಪತ್ತನೆಯ ಹುಟ್ಟುಹಬ್ಬ ಆಚರಿಸಿದರು. ಅಂದು ಲಕ್ಷಾಂತರ ಜನರು ಅವರ ಪಾದಕ್ಕೆ ಹಣೆಹಚ್ಚಿ ತಮ್ಮ ಕರ್ಮಫಲಗಳೆಲ್ಲ ಕಳೆದುಕೊಂಡು ಉದ್ಧಾರವಾದರು. ದಿ: ೧೪-೪-೧೯೫೦, ಶುಕ್ರವಾರದಂದು ಶ್ರೀಗಳು ತಮ್ಮ ದಿನನಿತ್ಯದ ವಿಧಿಗಳನ್ನು ಮುಗಿಸಿ, ಸಂಜೆ ತಮ್ಮನ್ನು ಎಬ್ಬಿಸಿ ಕುಳಿರಿಸಬೇಕೆಂದು ತಿಳಿಸಿ ಮಲಗಿದರು. ಶಿಷ್ಯರು ಸಂಜೆ ಅವರನ್ನು ಎಬ್ಬಿಸಿ ಕುಳಿರಿಸಿ, ಉಪಚರಿಸತೊಡಗಿದರು. ಪಕ್ಕದಲ್ಲೇ ನಿಂತಿದ್ದ ವೈದ್ಯರಿಗೆ ತಕ್ಷಣವೇ ರಮಣರಿಗೆ ಆಕ್ಸಿಜನ್‌ದ ಅವಶ್ಯಕತೆಯಿದೆಯೆನಿಸಿತು. ಆದರೆ ಅವರು ಕೈಸನ್ನೆಯಿಂದಲೇ ಬೇಡವೆಂದು ತಿಳಿಸಿದರು. ಅವರ ಅಂತಿಮಕ್ಷಣ ಸಮೀಪಿಸುತ್ತಿರುವುದನ್ನು ಕಂಡ ಶಿಷ್ಯರು ಶೋಕತಪ್ತರಾದರು. ಭಕ್ತರು 'ಅರುಣಾಚಲಶಿವ, ಅರುಣಾಚಲಶಿವ' ಎಂದು ಹಾಡುತ್ತ ತಮ್ಮ ದುಃಖ ಮರೆಯಲು ಯತ್ನಿಸಿದರು. ರಮಣರು ಒಂದು ಕ್ಷಣ ಕಣ್ಣ ತೆರೆದು ತಮ್ಮ ಕೃಪಾದೃಷ್ಟಿಯನ್ನು ಅಲ್ಲಿ ನೆರೆದ ಜನರೆಲ್ಲರ ಮೇಲೆ ಬೀರಿ, ಶಾಂತವಾಗಿ ಕಣ್ಮುಚ್ಚಿ ಪರಮಾತ್ಮನಲ್ಲಿ ಲೀನವಾದರು.

ಮಹರ್ಷಿಗಳ ಸಮಾಧಿಯನ್ನು ಅವರ ತಾಯಿಯ ಸಮಾಧಿಯ ಬಳಿಯಲ್ಲೇ ಮಾಡಲಾಯಿತು. ಭಗವಾನರು ತಮ್ಮ ಕೊನೆದಿನಗಳಲ್ಲಿ ಆಗಾಗ ಹೇಳುತ್ತಿದ್ದ "ನಾನು ಹೋಗುವುದಿಲ್ಲ. ಹೋಗುವುದೆಲ್ಲಿದೆ? ನಾನು ಇಲ್ಲಿಯೇ ಇರುತ್ತೇನೆ" ಎಂಬ ಮಾತುಗಳನ್ನು ನಂಬಿ ಇಂದಿಗೂ ಭಗವಾನರ ದರ್ಶನಕ್ಕೆ ಸಾವಿರಾರು ಜನ ಆಸ್ತಿಕರು ಅರುಣಾಚಲಕ್ಕೆ ಬರುತ್ತಿದ್ದಾರೆ. ತಮ್ಮ ಭಾವದ ಕಷ್ಟವನ್ನು ಹಿಂಗಿಸಿಕೊಂಡು, ಅವರ ಸಮಾಧಿಯ ಸನ್ನಿಧಿಯಲ್ಲಿ ಅಲೌಕಿಕವಾದ ಸಮಾಧಾನದ ಸವಿಯನ್ನು ಸವಿಯುತ್ತಿದ್ದಾರೆ!

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

# ವೇದಾಂತ

ಈ ಜಗತ್ತಿನಲ್ಲಿ ಹುಟ್ಟಿದ ಪ್ರತಿಯೊಬ್ಬ ಮನುಷ್ಯನೂ ಹುಟ್ಟಿದಾಗಿನಿಂದ ಸಾಯುವವರೆಗೂ ಒಂದಲ್ಲ ಒಂದು ರೀತಿಯ ಕೆಲಸವನ್ನು ಮಾಡುತ್ತಲೇ ಇರುತ್ತಾನೆ. ಹೀಗೆ ಕೆಲಸ ಮಾಡುತ್ತಿರುವಾಗಲೇ ಅವನು ಮಾಡಿದ ಕೆಲಸಕ್ಕೆ ತಕ್ಕಂತಹ ಫಲವನ್ನು ಪಡೆಯುವುದಕ್ಕೂ ಅವನು ಯೋಗ್ಯತೆಯನ್ನು ಪಡೆದುಕೊಳ್ಳುತ್ತಾನೆ. ಅಂದಮೇಲೆ ಅವನು ಮಾಡುವ ಒಳ್ಳೆಯ ಕೆಲಸಕ್ಕೆ ಒಳ್ಳೆಯ ಫಲ, ಕೆಟ್ಟ ಕೆಲಸಕ್ಕೆ ಕೆಟ್ಟ ಫಲ ಹೊಂದುವ ಯೋಗ್ಯತೆ ಅವನದಾಗುತ್ತದೆ.

ಪ್ರಪಂಚದಲ್ಲಿ ಹುಟ್ಟುವ ಯಾವ ಮನುಷ್ಯನೂ, ಹುಟ್ಟುವಾಗಲೇ ಪರಿಪೂರ್ಣನಾಗಿ ಹುಟ್ಟುವುದಿಲ್ಲ. ಕ್ರಮಕ್ರಮವಾಗಿ ಒಳ್ಳೆಯತನವನ್ನು ಹೊಂದಿ ಮುಂದುವರಿಯಬೇಕಷ್ಟೆ. ಹೀಗಾಗಿ, ಮನುಷ್ಯ ತಾನು ಅನುಭವಿಸುವ ಸುಖ-- ದುಃಖಗಳಿಗೆ ತಾನೇ ಹೊಣೆಯಾಗುತ್ತಾನೆ. ಅಷ್ಟೇ ಅಲ್ಲ, ಸುಖದುಃಖಗಳಿಂದ ಕೂಡಿದ ಬದುಕು ಅವನದಾಗುತ್ತದೆ.

ಈ ತತ್ವವನ್ನು ತಿಳಿದುಕೊಳ್ಳದ ಮನುಷ್ಯ ಕಷ್ಟ-- ನಷ್ಟಗಳಿಗೀಡಾದಾಗ, ದುಃಖ-- ದುಮ್ಮಾನಗಳಿಗೊಳಗಾದಾಗ, ವಿಪತ್ಪರಂಪರೆ ಪ್ರಾಪ್ತವಾದಾಗ, ಮಾನಸಿಕ ಆಘಾತಕ್ಕೆ ಗುರಿಯಾಗುತ್ತಾನೆ, ಈ ಆಘಾತಕ್ಕೆ ಕಾರಣ, ಅವನ ಬಗ್ಗೆ ಅವನಿಗೆ ತಿಳುವಳಿಕೆ ಇಲ್ಲದಿರುವುದೇ ಆಗಿದೆ. ಇದರ ಪರಿಹಾರವೂ ಅವನೊಳಗೇ ಅಡಗಿಕೊಂಡಿರುತ್ತದೆ.

ಇವತ್ತಿನ ಜಗತ್ತಿನಲ್ಲಿ ಪ್ರತಿಯೊಬ್ಬ ಮನುಷ್ಯನೂ ತನ್ನೊಳಗೆ ಅಡಗಿರುವ ಶಕ್ತಿಯನ್ನು ಗುರುತಿಸುವುದರಲ್ಲಿ ಸಂದೇಹವನ್ನು ತಳೆದಿರುತ್ತಾನೆ. ಉದಾಹರಣೆಗೆ ಹೇಳುವುದಾದರೆ, ಜ್ಯೋತಿಶ್ಶಾಸ್ತ್ರಕ್ಕೆ ಜ್ಯೋತಿಷಿ ಮಹತ್ವ ಕೊಡುವುದಿಲ್ಲ. ಆದರೆ, ವೇದಾಂತಿಯಾದವನು, ಜ್ಯೋತಿಶ್ಶಾಸ್ತ್ರದಲ್ಲಿ ವಿಶೇಷವಾದ ಆಸಕ್ತಿ ತೋರಿಸುವುದನ್ನು ಕಾಣುತ್ತೇವೆ. ಜೀವನದ, ಪ್ರತಿಯೊಂದು ಕ್ಷೇತ್ರದಲ್ಲೂ ಇಂತಹದನ್ನು ನಾವು ಗುರುತಿಸಬಹುದು. ಹೀಗಾಗಿ, ವೈದ್ಯನಾದವನು ಕ್ರೀಡಾ ಕ್ಷೇತ್ರದಲ್ಲಿ, ನ್ಯಾಯವಾದಿಯಾದವನು ಸಾಹಿತ್ಯಕ್ಷೇತ್ರದಲ್ಲಿ, ಪೋಲೀಸಿನವ ಸಂಗೀತದಲ್ಲಿ, ಈ ರೀತಿ ತನಗೆ ಸಂಬಂಧಪಡದ, ತನ್ನದಲ್ಲದ ಬೇರೆ ವಿಷಯಗಳಲ್ಲಿ ಮನುಷ್ಯ ಆಸಕ್ತಿ ತಳೆದಿರುವುದನ್ನು, ಈ ದಿನಗಳಲ್ಲಿ ನಾವು ಹೆಚ್ಚು ಹೆಚ್ಚಾಗಿ ನೋಡುತ್ತಿದ್ದೇವೆ.

ಮನುಷ್ಯ ಮೊದಲು ತನ್ನಲ್ಲಿರುವ ಅರಕೆ--ಕೊರತೆಗಳು ಏನೆಂಬುದನ್ನು ಗುರುತಿಸಿಕೊಳ್ಳಬೇಕು. ಆಗ, ಅವನ ಮನಸ್ಸಿನಲ್ಲಿ ಏಳುವ ಸಮಸ್ಯೆ-- ಸಂದೇಹಗಳಿಗೆ ಪರಿಹಾರವನ್ನು ಹುಡುಕುವುದು ಸುಲಭವಾಗುತ್ತದೆ. ಏಕೆಂದರೆ, ಅರೆ--ಕೊರೆ ಇರುವಾಗ ಪೂರ್ಣತೆ ಪಡೆಯುವುದು ಸಾಧ್ಯವಿಲ್ಲ. ಪೂರ್ಣತೆ ಪಡೆಯದೆ ಮನಸ್ಸಿನಲ್ಲಿ ತೃಪ್ತಿಯ ಭಾವನೆ ಬರುವುದು ಸಾಧ್ಯವಿಲ್ಲ. ಈ ತೃಪ್ತಿಯ ಭಾವನೆ ಹುಟ್ಟದೆ, ಯಾರೊಂದಿಗೂ ಯಾವುದರಲ್ಲೂ ಸಹಕರಿಸಲು ಆಗುವುದಿಲ್ಲ.

ಪೂರ್ಣತ್ವವನ್ನು ಪಡೆಯುವುದು ಎಂದರೆ, ವಸ್ತು ಸ್ಥಿತಿಯಲ್ಲಿರುವ ಸತ್ಯಾಂಶವನ್ನು ಅರ್ಥಮಾಡಿಕೊಳ್ಳುವ ಮನಃಸ್ಥಿತಿಯನ್ನು ಹೊಂದುವುದು.

ಒಂದು ಮಡಕೆಯನ್ನು ನೋಡಿದಾಗ ಅದು ನಮಗೆ ಕೇವಲ ಮಡಕೆ ಎಂದಷ್ಟೇ ತೋರುತ್ತದೆ. ಆದರೆ, ಯೋಚಿಸಿ ನೋಡಿದರೆ, ಮಡಕೆ ಆಗಿರುವುದು ಮಣ್ಣಿನಿಂದ ಎನ್ನುವ ತಿಳುವಳಿಕೆ ಮನಸ್ಸಿಗೆ ಆಗುತ್ತದೆ. ಥಳಥಳನೆ ಹೊಳೆಯುತ್ತಾ ಮಿರಮಿರನೆ ಮಿರುಗುವ ಒಡವೆಗಳು ಎಲ್ಲರ ಕಣ್ಣಳನ್ನೂ ಕೋರೈಸುತ್ತವೆ ತಾನೇ? ವಿಚಾರ ಮಾಡಿ ನೋಡಿದಾಗ, ಮೂಲತಃ, ಅದೂ ಚಿನ್ನವೇ ಎಂದು ತಿಳಿಯುತ್ತೇವೆ?

ಇದೇ ರೀತಿಯಲ್ಲಿ, ವಿಚಾರಮಾಡಿ, ಮನುಷ್ಯನ ಮನಸ್ಸಿನ ಮೂಲದಲ್ಲಿ ಮನೆ ಮಾಡಿರುವ 'ಅಹಂ' ಭಾವವನ್ನು ನಾವು ಗುರುತಿಸಬೇಕು. ಈ 'ಅಹಂ' ಭಾವವನ್ನು ಬಿಟ್ಟಲ್ಲದೆ ಮನುಷ್ಯ ಉದ್ಧಾರವಾಗುವುದಿಲ್ಲ. ಅಹಂಭಾವಕ್ಕೆ ಕಾರಣ 'ನಾನು' ಎನ್ನುವುದು. ಈ 'ನಾನು' ಎನ್ನುವುದನ್ನು ಬಿಟ್ಟರೆ ಮಾತ್ರ ನಮ್ಮಲ್ಲಿ ತಿಳುವಳಿಕೆ ಹುಟ್ಟಲು ಸಾಧ್ಯ.

ಈಗ, ಈ 'ನಾನು' ಅನ್ನುವುದನ್ನು ಕುರಿತು ಸ್ವಲ್ಪ ವಿಚಾರ ಮಾಡೋಣ. ದಿನ ನಿತ್ಯದ ವ್ಯವಹಾರದಲ್ಲಿ ನಾನು ಇಲ್ಲದಿದ್ದರೆ ಬದುಕುವುದೇ ಸಾಧ್ಯವಾಗುವುದಿಲ್ಲ. 'ನಾನು', 'ನನ್ನದು', 'ನನ್ನಮನೆಯವರು', 'ನನ್ನ ಸಮಾಜ', 'ನನ್ನ ದೇಶ', 'ನನ್ನ ರಾಷ್ಟ್ರ' ಎನ್ನುವ ಅಭಿಮಾನದಿಂದ ಕೂಡಿದ 'ನಾನು' ಇದ್ದಾಗಲೇ ಜಗತ್ತಿನ ವ್ಯಾವಹಾರ ಜರುಗುವುದು; ಅದಿಲ್ಲದೆ, ವಿಶ್ವ ವ್ಯಾಪಾರ ಜರುಗುವುದಿಲ್ಲ.

"ಇದು ನನ್ನ ಪುಸ್ತಕ" "ಇದು ನನ್ನ ಮನೆ", ಅನ್ನುವಾಗ ನಾನು ಬೇರೆ, ಪುಸ್ತಕ ಬೇರೆ, ಪುಸ್ತಕ ನನಗೆ ಸೇರಿದ ವಸ್ತು. ಹಾಗೆಯೇ ನಾನು ಬೇರೆ, ಮನೆ ಬೇರೆ. ಆ ಮನೆ ನನಗೆ ಸೇರಿದ್ದು ಎನ್ನುವ ಭಾವ. ಅಂದರೆ, ನಾನು ಬೇರೆ ಮನೆ ಬೇರೆ ಎಂದಾಯಿತು?

ಹೀಗೆಯೇ, 'ಇದು ನನ್ನ ಶರೀರ' 'ಇದು ನನ್ನ ಮನಸ್ಸು' ಎನ್ನುವಾಗ 'ಶರೀರ' ಮನಸ್ಸು ಇವು ಬೇರೆ. ನಾನು ಬೇರೆ. ನನಗೆ ಉಪಯೋಗವಾಗುವಂತಹವು ಇವು ಎನ್ನುವ ಅರ್ಥವಾಗುತ್ತದೆ. ಅಂದರೆ, ಇವೆಲ್ಲಾ, ನಾನು ಬಳಸುವ ಉಪಕರಣಗಳು, ಅಲ್ಲವೇ? ಅಂದಮೇಲೆ, ಈ ಎಲ್ಲವನ್ನು ಉಪಯೋಗಿಸುವಂತಹುದು ಬೇರೆ ಇದೆ ಎಂದಾಯಿತು. ಈ ಎಲ್ಲವನ್ನೂ ತನಗೆ ಬೇಕಾದ ಹಾಗೆ ಉಪಯೋಗಿಸುವಂತಹುದೇ ಈ 'ನಾನು'.

ಈ ರೀತಿಯಲ್ಲಿ, ಜಗತ್ತಿನ ಎಲ್ಲವನ್ನೂ ಉಪಯೋಗಿಸಿಕೊಳ್ಳುವಾಗ ಎಲ್ಲವೂ 'ನನಗೆ' 'ನನ್ನದಕ್ಕೆ' ಮಾತ್ರ ಎಂದು ಗೆರೆ ಹಾಕಿಕೊಂಡುಬಿಟ್ಟರೆ, ಅದೇ ಅಜ್ಞಾನ. ಪ್ರಪಂಚದಲ್ಲಿ ಇರುವ ಎಲ್ಲದೂ ಎಲ್ಲರಿಗಾಗಿ, ಎಲ್ಲರ ಒಳ್ಳೆಯದಕ್ಕೆ, ಎಲ್ಲರಿಗಾಗಿ ಇರುವುದನ್ನು, ಎಲ್ಲರ ಒಳ್ಳೆಯದಕ್ಕಾಗಿ ಉಪಯೋಗ ಮಾಡಲು 'ನಾನು' ಕೆಲಸ ಮಾಡಬೇಕು ಎಂದು 'ನಾನು' ಎನ್ನುವುದನ್ನು ಕುಟುಂಬಕ್ಕೆ, ಸಮಾಜಕ್ಕೆ, ಜಗತ್ತಿಗೆ ಉಪಯೋಗವಾಗುವಂತೆ ಮಾಡುವುದೇ. ಜ್ಞಾನ.

ಇಷ್ಟು ಸರಳವಾದ ವಿಷಯವನ್ನು ಆಧ್ಯಾತ್ಮಪದಗಳನ್ನು ಬಳಸಿದಾಗ ನಮಗೆ ಹೇಗೆ ಹೇಗೋ ಅನಿಸುತ್ತದಷ್ಟೆ.

ಈಗ ನೋಡಿ, ಮನಸ್ಸನ್ನು ಗೋಜಲು ಮಾಡಿಕೊಳ್ಳದೆ, ವಾಸ್ತವವಾಗಿ ಇರುವ ವಸ್ತುಸ್ಥಿತಿಯನ್ನು ಅರ್ಥಮಾಡಿಕೊಂಡರೆ, ಸಹಜವಾಗಿ ಇರುವ 'ಸತ್ಯ' ಏನೆಂದು ತಿಳಿಯುತ್ತದೆ. ಆಗ ಮನಸ್ಸು ಪ್ರಶಾಂತವಾಗುತ್ತದೆ.

'ನಾನು'ವನ್ನು ಬಿಡಬೇಕು ಎಂದಾಕ್ಷಣ ಸಂಸಾರವನ್ನು ಬಿಟ್ಟು ದೂರ ಹೋಗಬೇಕು ಎಂದೇನೂ ಇಲ್ಲ. ನೀವು ದಿನವೂ ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತೀರಿ ಅಲ್ಲವೇ? ಆಗ ನಿಮ್ಮ ಮುಖದ ಪ್ರತಿ

ಪಾರ್ವತಿ. ಕೃ. ನ. ಮೂರ್ತಿ

ಬಿಂಬ ಕನ್ನಡಿಯಲ್ಲಿ ಕಾಣುತ್ತದೆ. ಕನ್ನಡಿ ಬಿಟ್ಟು ದೂರ ಸರಿದರೆ ಅದು ದೂರವಾಗುತ್ತದೆ. ಮತ್ತೆ ಕನ್ನಡಿಯಲ್ಲಿ ನೋಡಿಕೊಂಡರೆ ಮತ್ತೆ ಕಾಣುತ್ತದೆ. ಅಂದರೆ ನೀವು ದೂರವಾದ ಮಾತ್ರಕ್ಕೆ ಕನ್ನಡಿಯಿಂದ ದೂರವಾದ ಹಾಗೆ ಅನಿಸುತ್ತದೆ. ಆದರೆ, ಮತ್ತೆ ನೋಡಿದಾಗ, ಅಲ್ಲಿಯೇ ಇರುವುದೆಂದು ತಿಳಿದು ಬರುತ್ತದೆ, ಅಲ್ಲವೇ?

ಹಾಗೆಯೇ, ಸಂಸಾರವನ್ನು ಬಿಡುವುದು ಅಂದಾಕ್ಷಣ ಸಾಂಸಾರಿಕ ವ್ಯವಹಾರವನ್ನೆಲ್ಲಾ ಬಿಟ್ಟು ಕೆಲಸವನ್ನೇ ಮಾಡದೆ ಜಡವಾಗುವುದು ಎಂದು ಅರ್ಥವಲ್ಲ. ಈ ಸಂಸಾರ 'ನನ್ನದು'. ಇದರಲ್ಲಿ ಎಲ್ಲವನ್ನೂ ಮಾಡುವವನು 'ನಾನು' ಎನ್ನುವ ಬುದ್ಧಿಯಿಂದ ದೂರನಾಗಿ, ಈ ಸಂಸಾರದ ಎಲ್ಲ ವ್ಯವಹಾರವನ್ನೂ ಎಲ್ಲರ ಕ್ಷೇಮಕ್ಕಾಗಿ ಮಾಡುವುದು ಎಂದು ಯೋಚಿಸಬೇಕು. ಆಗ ನಾವು ಮಾಡುವ ಯೋಚನೆಗೆ ತಕ್ಕಂತೆ, ನಮ್ಮಿಂದ ಕೆಲಸ ನಡೆಯುತ್ತದೆ. ನಮ್ಮ ಯೋಚನೆಗಳು ಒಳ್ಳೆಯ ದಾರಿಯಲ್ಲಿ ಸಾಗಿದರೆ, ನಮ್ಮ ಮನಸ್ಸು ಶುದ್ಧವಾಗಿದೆ ಎಂದರ್ಥ. ಮನಸ್ಸು ಶುದ್ಧವಾದರೆ ಮನುಷ್ಯನೇ ದೇವರಾಗುತ್ತಾನೆ. ಆಗ 'ನಾನು' ನಿಮಿತ್ತ ಮಾತ್ರ ಎನ್ನುವ ತಿಳುವಳಿಕೆ ಬರುತ್ತದೆ. ಅಹಂಕಾರ, ಮಮಕಾರ, ವ್ಯಾಮೋಹಗಳಿಂದ ಬಿಡುಗಡೆ ಹೊಂದಿ, ಸಂಸಾರದ ಶೋಕ ನಿವೃತ್ತಿಯಾಗಿ, ಪರಬ್ರಹ್ಮ ಸಾಕ್ಷಾತ್ಕಾರವಾಯಿತು ಎನ್ನುವುದು ಇದನ್ನೇ.

ಈ ಮಟ್ಟಕ್ಕೆ ನಾವು ಏರಿದೆವೆಂದರೆ, ಆಕಾಶದಲ್ಲಿ ಬೀಸುವ ತಂಗಾಳಿಯಂತೆ, ಸೂರ್ಯೋದಯದ ಸ್ವತಂತ್ರ ಆನಂದ ಕಿರಣದಂತೆ, ಮಧ್ಯರಾತ್ರಿಯ ನಕ್ಷತ್ರದ ತೇಜಸ್ಸಿನಂತೆ, ಸಮುದ್ರವನ್ನು ಸೇರುವ ನದಿಯ ಸ್ವಚ್ಛಂದ ಪ್ರವಾಹದಂತೆ, ಯಾರ ಹಂಗಿಗೂ ಒಳಗಾಗದ ಸ್ವತಂತ್ರ ಮನೋಭಾವ ಹುಟ್ಟಿ, ಎಲ್ಲ ಕಡೆಯೂ ಬಂಧನ, ಬದ್ಧತೆ, ಅತೃಪ್ತಿಯ ತಾಂಡವ ನೃತ್ಯ ನಡೆಯುತ್ತಿದೆಯಲ್ಲಾ', ಎಂದು ಕೊರಗುವ ಜೀವ, ಸ್ವತಂತ್ರವಾದ ತೃಪ್ತಿಯ ಭಾವವನ್ನು ಅನುಭವಿಸುತ್ತೇವೆ.

ಆಗ, ಈ ಜಗತ್ತನ್ನೆಲ್ಲಾ ವ್ಯಾಪಿಸಿಕೊಂಡು, ಇಡೀ ಪ್ರಪಂಚವನ್ನೇ ಆಧಾರಮಾಡಿಕೊಂಡು, ಈ ಪ್ರಪಂಚದೊಳಗೇ ಅಡಗಿಕೊಂಡಿರುವ, ನಿಜವಾಗಿಯೂ ಇರುವ ಒಂದೇ ಒಂದು ತತ್ವವನ್ನು ಗುರುತಿಸುವ ಶಕ್ತಿ ಮನುಷ್ಯನ ಮನಸ್ಸಿನಲ್ಲಿ ಹುಟ್ಟುತ್ತದೆ.

ಇವತ್ತು ನಾವು ನೆಲದಲ್ಲಿ ಬಿತ್ತಿದ ಬೀಜ, ಕಾಲಕಳೆದು ಕೆಲ ದಿನಗಳಾದ ನಂತರ ಫಲ ಕೊಡುತ್ತದೆ ಎನ್ನುವ ತತ್ವವನ್ನು ಮನುಷ್ಯ ತಿಳಿದುಕೊಳ್ಳಬೇಕು. ಈ ವಿಷಯವನ್ನು ಹುಡುಕುತ್ತಾ ಹುಡುಕುತ್ತಾ, ಕಡೆಗೊಂದು ದಿನ, ಈ ತಿಳುವಳಿಕೆ ಉಂಟಾದಾಗ, ತಣ್ಣಗಿನ ಬೆಂಕಿಯ ಹಾಗೆ, ಶಾಖವಿಲ್ಲದ ಸೂರ್ಯನ ಹಾಗೆ, ಸುಖ--ದುಃಖಗಳಿಲ್ಲದೆ ಜಗತ್ತಿಲ್ಲ ಎನ್ನುವ ತಿಳುವಳಿಕೆ ಉಂಟಾಗುತ್ತದೆ. ಇದನ್ನೇ ಸ್ವಸ್ವರೂಪದರ್ಶನ ಎನ್ನುವುದು.

ಅದೇನೇ ಇರಲಿ, ಮನುಷ್ಯ ಒಳ್ಳೆಯ ಯೋಚನೆ ಮಾಡುವುದರಲ್ಲಿ, ತನ್ನನ್ನು ತೊಡಗಿಸಿಕೊಂಡರೆ ಒಳ್ಳೆಯ ಕೆಲಸ ಮಾಡುವುದಕ್ಕೆ ಪ್ರಯತ್ನ ಪಡಲು ಸಹಾಯಕವಾಗುತ್ತದೆ. ಒಳ್ಳೆಯ ಕೆಲಸ ಮಾಡಿದರೆ ಒಳ್ಳೆಯ ಫಲ ಸಿಗುತ್ತದೆ. ಇದರಿಂದಾಗಿ, ಅವನ ಮನಸ್ಸಿನಲ್ಲಿ ಮನೆ ಮಾಡಿದ್ದ ಕತ್ತಲೆಯ ಕೊರತೆ ಇಲ್ಲವಾಗಿ ತಿಳುವಳಿಕೆಯ ಬೆಳಕು ಹುಟ್ಟುತ್ತದೆ. ಆಗ ಅವನು ತನ್ನ ಉದ್ಧಾರಕ್ಕೆ ತಾನೇ ಕಾರಣನಾಗುತ್ತಾನೆ.

"ಇದೇ ನಿತ್ಯ ಜೀವನದಲ್ಲಿನ ವೇದಾಂತ"

(ಹುಬ್ಬಳ್ಳಿಯ ಆರ್ಷೇಯ ವಿದ್ಯಾಪೀಠದ ಸ್ವಾಮಿಜಿ ಶ್ರೀ ಚಿದ್ರೂಪಾನಂದಜೀಯವರ ಉಪನ್ಯಾಸದಿಂದ ಆಧಾರಿತ)



# ವಿಶ್ವವಿಭೂತಿ ಬಸವೇಶ್ವರ

ಹೊನ್ನಾವರ ಆರ್.ಜಿ. ಶ್ಯಾನಭಾಗ

ಮನುಕುಲ ದಾರಿಗೆಟ್ಟು ಅಂಧಕಾರದಲ್ಲಿ ಮುಳುಗಿದಾಗ ಧರ್ಮದ ಹೆಸರಿನಲ್ಲಿ ಕಂದಾಚಾರ ಮೂಢ ನಂಬಿಕೆಗಳು ಮೆರೆಯ ತೊಡಗಿದಾಗ ವಿಶ್ವವಿಭೂತಿ ಬಸವಣ್ಣನವರು ಅವತರಿಸಿ ಸಮಾಜಕ್ಕೆ ಬೆಳಕನ್ನು ನೀಡಿ ಉದ್ಧರಿಸಿದರು. ಜಗಜ್ಜ್ಯೋತಿ ಬಸವೇಶ್ವರರ ವ್ಯಕ್ತಿತ್ವ ವಚನ ಸಾಹಿತ್ಯದಲ್ಲಿ ಕಿರೀಟಪ್ರಾಯವಾದುದೆಂದು ಸರ್ವವಿದಿತ. ತಮ್ಮ ಅನುಭವ ಹಾಗೂ ಜ್ಞಾನಗಳೆರಡನ್ನೂ ಎರಕಹೊಯ್ದು ವಚನಗಳನ್ನು ನಿರ್ಮಿಸಿ ಕನ್ನಡ ಸಾಹಿತ್ಯಲೋಕಕ್ಕೆ ಕೊಡುಗೆಯನ್ನು ನೀಡಿರುವರು. ಮಾತಿಗೆ ಜ್ಯೋತಿರ್ಲಿಂಗದ ಬೆಳಕನ್ನು ನೀಡಿ ತಮ್ಮ ಮಾತನ್ನೇ ಸಾಹಿತ್ಯವನ್ನಾಗಿ ನಿರ್ಮಿಸಿ ಬಸವೇಶ್ವರರು ಸಾಹಿತ್ಯ ಸಾರ್ವಭೌಮರಾಗಿ ಮೆರೆದಿರುವುದು ಸುಪರಿಚಿತ. ಕೇವಲ ಕಾಯಕ ಸಾಹಿತ್ಯಕ್ಕೆ ಮಾತ್ರ ಒತ್ತನ್ನು ನೀಡದೆ ಆತ್ಮ ಸಾಹಿತ್ಯದ ಬೆಳವಣಿಗೆಗೂ ಪ್ರಾಧಾನ್ಯತೆಯನ್ನು ನೀಡಿರುವರು. ಸಾಂಪ್ರದಾಯಕ ವ್ಯವಸ್ಥೆಯಿಂದ ಜನರು ಹೊರಬರುವಂತಾಗುವ ವೈಚಾರಿಕ ಸಾಹಿತ್ಯ ಬಸವಣ್ಣನವರದಾಗಿದೆ. ಬಸವಣ್ಣನವರ ಸಾಹಿತ್ಯ ಪರಂಪರೆಯ ರಥವನ್ನು ಮುಂದೆಳೆದು ತಂದ ಭಗೀರಥರೆಂದರೆ ಷಣ್ಮುಖ ಸ್ವಾಮಿ ಹಾಗೂ ತೋಂಟದ ಸಿದ್ಧಲಿಂಗ ಯತಿಗಳು ಬಸವರ ಪ್ರತಿಭೆಯಿಂದಲೆ, ಹರಿಹರ ರಾಘವಾಂಕ ಪಾಲ್ಕುರಿಕೆ ಸೋಮನಾಥರು ಅನೇಕಾನೇಕ ಶರಣರ ಕುರಿತಾಗಿ ಕಾವ್ಯವನ್ನು ರಚಿಸಿದರು.

ಬಸವೇಶ್ವರರ ವ್ಯಕ್ತಿತ್ವ ಕನ್ನಡ ಸಾಹಿತ್ಯಕ್ಕೆ ತುಷ್ಟಿ ಪುಷ್ಟಿಯನ್ನು ನೀಡಿದೆಯಲ್ಲದೆ ಕನ್ನಡ ಸಾಹಿತ್ಯವ ಸ್ವಾದಿಷ್ಟತೆಯನ್ನು ಹೆಚ್ಚಿಸಿದೆ.

## ದೈವದತ್ತ ಪ್ರತಿಭೆ :

ಬಸವಣ್ಣನವರದು ಬಹುಮುಖ ಪ್ರತಿಭೆಯ ವ್ಯಕ್ತಿತ್ವ ಇದು ಅವರಲ್ಲಿ ದೈವದತ್ತವಾಗಿ ಒಡಮೂಡಿ ಬಂದದ್ದಾಗಿತ್ತು. ಪ್ರವಾದಿ, ದಾರ್ಶನಿಕ, ಕಾಯಕ ಯೋಗಿ, ಸಮತಾವಾದಿ, ಮುತ್ಸದ್ದಿ, ರಾಜಕಾರಣಿ ಅರ್ಥಶಾಸ್ತ್ರಜ್ಞ, ದಲಿತೋದ್ಧಾರಕ ಹಾಗೂ ನವ ಸಮಾಜದ ನಿರ್ಮಾಪಕರಾಗಿದ್ದ ಬಸವಣ್ಣನವರು ಲೋಕೋದ್ಧಾರಕ್ಕಾಗಿ ತಮ್ಮ ಬದುಕನ್ನೇ ಶ್ರೀಗಂಧದಂತೆ ತೇದಿದ್ದರು.

ಅನುಭವ ಮಂಟಪದ ಸೂತ್ರಧಾರಿಯಾಗಿದ್ದ ಬಸವಣ್ಣನವರು ಬಿಜ್ಜಳನ ಮಂತ್ರಿಯಾಗಿ ಕಾಯಕವನ್ನು ಕೈಗೊಂಡಿದ್ದರು. ಜಾತಿಗಳೆಲ್ಲವೂ ಮಾನವ ಕಲ್ಪಿತವಾದವುಗಳು, ಅವು ದೇವಕಲ್ಪಿತವಲ್ಲವೆಂದು ಘೋಷಿಸಿದರು. ಜಾತಿಕಟ್ಟು ಸಡಿಲುಗೊಳ್ಳದೇ ಕಾದರೆ, ಅಂತರ್ಜಾತೀಯ ವಿವಾಹಕ್ಕೆ ಪ್ರೋತ್ಸಾಹ ದೊರೆಯಬೇಕೆಂದು ಸಮರ್ಥನೆಯನ್ನೊಡ್ಡಿದರು. ಬ್ರಾಹ್ಮಣಮಂತ್ರಿ ಮಧುವರಸರ ಮಗಳ ಮತ್ತು ಸಮಗಾರ ಹರಳಯ್ಯನವರ ಮಗನ ವಿವಾಹವನ್ನು ಪ್ರೋತ್ಸಾಹಿಸಿ ತಮ್ಮ ಸಿದ್ಧಾಂತವನ್ನು ಅನುಷ್ಠಾನಗೊಳಿಸಿದರು. ಇದು ವೇದವಿರೋಧವಾದುದೆಂದು ಸನಾತನಿಗಳು ಬೊಬ್ಬೆಯಿಟ್ಟರು. ಇದಕ್ಕಾಗಿ ಬಸವ ತನ್ನ ಮಂತ್ರಿಪದವಿಯನ್ನು ತ್ಯಜಿಸಲೂ ಹಿಂಜರಿಯಲಿಲ್ಲ. ಅಂತರ್ಜಾತೀಯ ವಿವಾಹವಾದವರನ್ನು



ಶಿಕ್ಷಿಸಲೋಸುಗ ಬಿಜ್ಜಳನು ಬಸವೇಶ್ವರರನ್ನು ಗಡಿ ಪಾರು ಮಾಡಿದರು.

ಕ್ರಿ.ಶ. ೧೧೩೧ ರಲ್ಲಿ ಬಾಗೇವಾಡಿಯಲ್ಲಿ ಮಾದರಸ ಹಾಗೂ ಮಾದಲಾಂಬಿಕೆಯ ಸುಪುತ್ರರಾಗಿ ಜನಿಸಿದ ಬಸವೇಶ್ವರರು ಕಲ್ಯಾಣವನ್ನು ತಮ್ಮ ಕರ್ಮಭೂಮಿಯನ್ನಾಗಿ ಆರಿಸಿಕೊಂಡರು ಮತ್ತು ಕೂಡಲಸಂಗಮದಲ್ಲಿ ಬಂದು ಲಿಂಗೈಕ್ಯರಾದರು. ಚಾಲುಕ್ಯರ ರಾಜಧಾನಿಯಾದ ಕಲ್ಯಾಣವನ್ನು ಶಿವಶರಣರ ಆಡುಂಬೊಲವಾಗಿ ರೂಪಿಸಿದರು. ಬಸವಕಲ್ಯಾಣದ ಅರಿವಿನ ಮನೆ ಬಸವೇಶ್ವರರು ದಿವ್ಯದರ್ಶನವನ್ನು ಪಡೆದ ತಾಣ.

ಬಸವೇಶ್ವರರು ತಮ್ಮ ಬಾಲ್ಯವನ್ನು ಕಳೆದದ್ದು ಹಾಗೂ ವ್ಯಾಸಂಗವನ್ನು ಮಾಡಿರುವುದು ಕೂಡಲಸಂಗಮದಲ್ಲಿದ್ದಾಗ. ಸಂಗಮನಾಥನ ದೈವೀ ಪ್ರೇರಣೆಯಿಂದ ಬಸವಕಲ್ಯಾಣಕ್ಕೆ ಹೋಗಿ ಮಹಾಕ್ರಾಂತಿಯನ್ನೇ ಎಬ್ಬಿಸಿದರು. ಅಂತೆಯೇ ಶ್ರೀ ಕ್ಷೇತ್ರ ಕೂಡಲಸಂಗಮ ಬಸವೇಶ್ವರರಿಂದಾಗಿ ಜನಜನಿತವಾಗಿರುವುದು.

ಬಸವಣ್ಣನವರನ್ನು ಶಿವಶಿರಣರು ದ್ವಿತೀಯ ಶಂಭುವೆಂದು, ನಂದೀಶ್ವರನ ಅವತಾರವೆಂದು ಹಾಗೂ ಹಾಗೂ ಈಶ್ವರನ ಮೀಸಲ ಭಕ್ತನೆಂದೂ ಹೊಗಳಿರುವರು, ಶ್ರೀ ಸಾಮಾನ್ಯರೂ ಸಹಜವಾಗಿ ಧರ್ಮ ಅರಿಯುವಂತಾಗಲು ಭಗವಾನ್ ಬುದ್ಧನು ಜನರ ಆಡುಭಾಷೆಯಾದ ಪಾಲಿಯಲ್ಲಿ ಧರ್ಮಬೋಧನೆಯನ್ನು ಮಾಡಿರುವಂತೆ ಬಸವೇಶ್ವರರು ನಾಡಿನ ಆಡುಭಾಷೆಯಾದ ಕನ್ನಡ ಮಾಧ್ಯಮದಿಂದಲೇ ಧರ್ಮಬೋಧನೆಯನ್ನು ಮಾಡಿರುವುದರಿಂದ ಅದು ಜನಮನವನ್ನು ಮುಟ್ಟಿರುವುದು. ಆದ್ದರಿಂದಲೇ ಕನ್ನಡ ಸಾಹಿತ್ಯಕ್ಕೂ ಬಸವೇಶ್ವರರ ವಚನಗಳಿಗೂ ಅಂಟುನಂಟಿನ ಸಂಬಂಧ ಬೆಳೆದು ಬಂದಿರುವುದು, ಇವರ ವಚನಗಳು ಸಾಹಿತಿಗಳಿಗೆ ಬೆಲ್ಲವನ್ನು ಉಣಬಡಿಸಿದೆ.

## ಆಚಾರವೇ ಸ್ವರ್ಗ :

ಮನೆಯ ಆಧ್ಯಾತ್ಮಿಕ ಪರಿಸರ ಬಾಲ ಬಸವನಲ್ಲಿ ಬದುಕಿಗಾಗಿ ಭರವಸೆಯ ಚಿಗುರೊಡೆಸಿತು. ಸಮಾಜದಲ್ಲಿಯ ಮೌಢ್ಯವಿಚಾರಗಳಿಂದ ಇವರು ಬೇಸತ್ತಿದ್ದರು. ಮಾತಾಪಿತರು ಇವನಿಗೆ ಉಪನಯನವನ್ನು ಮಾಡಲು ಯೋಚಿಸಿದಾಗ ಬಾಲಕನು ಧಾರ್ಮಿಕ ವಿಧಿಗಳನ್ನು ತಿರಸ್ಕರಿಸಿದನು. ಇಲ್ಲಿಂದಲೇ ಬಸವನಲ್ಲಿ ಕ್ರಾಂತಿಯ ಬೀಜಾಂಕುರ ಒಡೆದಿತು.

ವೈಚಾರಿಕ ಕ್ರಾಂತಿಯಲ್ಲಿ ಬಸವಣ್ಣನವರ ಸಾಧನೆ ಮನನೀಯ. ಅವರು ತಾವು ಎಂದೆಂದಿಗೂ ಸಂಪ್ರದಾಯ ಹಾಗೂ ಪರಂಪರೆಯ ದಾಸರಾಗಿ ಉಳಿಯಲು ಅಪೇಕ್ಷಿಸಲಿಲ್ಲ. ಅವರು ಸ್ವತಂತ್ರ ವಿಚಾರವಾದಿಗಳಾಗಿದ್ದರು. ಧರ್ಮದ ಹೆಸರಲ್ಲಿ ನಡೆಯುವ ಮೂಢನಂಬಿಕೆ, ಕಂದಾಚಾರ, ಹಾಗೂ ಅಂಧಶ್ರದ್ಧೆಗಳನ್ನು ಕಿತ್ತೊಗೆಯುವ ಸಾಹಸಕ್ಕಿಳಿದರು.

ಸ್ವರ್ಗ ನರಕಗಳೆಂಬ ಕಲ್ಪನೆಯನ್ನು ನಿರಾಕರಿಸಿದರು. ದೇವಲೋಕ ಮೃತ್ಯುಲೋಕವೆಂಬುವುದು ಬೇರೊಂದಿಲ್ಲ. ಸತ್ಯನುಡಿಯುವುದೇ ದೇವಲೋಕ, ಮಿಥ್ಯನುಡಿಯುವುದೇ ನರಕಲೋಕ. ಆಚಾರವೇ ಸ್ವರ್ಗ ಅನಾಚಾರವೇ ನರಕ. ಅಯ್ಯಾ ಎಂದೊಡೆ ಸ್ವರ್ಗ ಎಲವೋ ಎಂದೊಡೆ ನರಕ --ಎಂದು ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿರುವರು. ನಮ್ಮ ನುಡಿನಡೆಗಳಿಂದಲೇ ಪಾಪಪುಣ್ಯ ಸ್ವರ್ಗನರಕಗಳು ಸೃಷ್ಟಿಯಾಗುತ್ತವೆ. ನಮ್ಮ ನಡೆನುಡಿಗಳನ್ನು ತಿದ್ದಿಕೊಳ್ಳುವುದರಿಂದಲೇ ಸ್ವರ್ಗಸುಖವನ್ನುಣ್ಣ ಬಹುದಾಗಿದೆ.

ನಮ್ಮ ಬದುಕು ಜ್ಯೋತಿಶ್ಶಾಸ್ತ್ರದ ಪ್ರಭಾವವಲಯಕ್ಕೆ ಸಿಲುಕಿದೆ. ಶುಭ ಅಶುಭಗಳ ಲೆಕ್ಕಾಚಾರ ಹಾಕಿಯೇ ನಮ್ಮ ವ್ಯವಹಾರಕ್ಕಾಗಿ ಮುಹೂರ್ತಗಳನ್ನು ಹುಡುಕುತ್ತಿರುತ್ತೇವೆ, ಬಸವಣ್ಣನವರು ಶುಭ ಹಾಗೂ ಅಶುಭ ಶಕುನವನ್ನು ಅಲ್ಲಗಳೆದರು. ಜನರನ್ನು ಇದರ ಬಿಗಿಮುಷ್ಟಿಯಿಂದ ಪಾರುಮಾಡಿದರು.

ಅಸಮಾನತೆ ಅಸ್ಪೃಶ್ಯತೆಯನ್ನು ನಿರಾಕರಿಸಿ ವರ್ಗಾತೀತ ಸಮಾಜದ ನಿರ್ಮಾಣಕ್ಕಾಗಿ ಬಸವೇಶ್ವರರು ದೀಕ್ಷೆಯನ್ನು ತೊಟ್ಟರು. ಕೀಳೆಂಬವರಿಗೆ ಸಂಸ್ಕಾರವನ್ನು ನೀಡಿ ಸಮಾಜದ ಮೇಲ್ದರ್ಜೆಗೇರಿಸಿದರು. ತಾವು ಸ್ಥಾಪಿಸಿರುವ ಅನುಭವ ಮಂಟಪದಲ್ಲಿ ಮಡಿವಾಳ ಮಾಚಯ್ಯ, ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ, ಕುಂಬಾರ ಗುಂಡಯ್ಯ, ಹಡಪದ ಅಪ್ಪಣ್ಣ, ನುಲಿಯ ಚಂದಯ್ಯ, ಮತ್ತು ಅಂಬಿಗ ಚೌಡಯ್ಯ --ಮೊದಲಾದ ಸಮಾಜದಲ್ಲಿ ಕೆಳಜಾತಿಯವರು ಮತ್ತು ಕೆಳವ್ಯಕ್ತಿಯವರೆನ್ನಲಾದವರನ್ನು ಸಮಾನಪಂಕ್ತಿಯಲ್ಲಿ ಕುಳ್ಳಿರಿಸಿ ಚರ್ಚೆಯಲ್ಲಿ ಭಾಗವಹಿಸುವ ಅವಕಾಶವನ್ನು ಕಲ್ಪಿಸಿದರು. ಧಾರ್ಮಿಕ ಸಾಧನೆಯಲ್ಲಿ ಪುರುಷರಿಗಿರುವಷ್ಟೇ ಪಾಲುಗಾರಿಕೆಯನ್ನು ಪಡೆಯಲು ಸ್ತ್ರೀಯರಾದರೂ ಅರ್ಹರು ಎಂದು ಸಮರ್ಥಿಸಿದರು, ಅನುಭವಮಂಟಪದ ಕಾರ್ಯಕಲಾಪಗಳಲ್ಲಿ ಸ್ತ್ರೀಯರು ಪುರುಷರೊಡನೆ ಸಮಾನಸ್ಕಂದರಾಗಿ ಪಾಲ್ಗೊಳ್ಳುತ್ತಿದ್ದರು. ಅನೇಕ ಸ್ತ್ರೀಯರು ವಚಾನಗಾರ್ತಿಯವರು.

## ಕಾಯಕ ಧರ್ಮ :

ಬಸವಣ್ಣನವರದು ಮಾನವೀಯ ಧರ್ಮ, ಸಂಸಾರಿಗಳ ಧರ್ಮ, ಪ್ರಾಪಂಚಿಕರ ಧರ್ಮ, ದುಡಿದುಣ್ಣುವ ಕರ್ಮಚಾರಿಗಳ ಧರ್ಮ, ಶ್ರಮಜೀವಿಗಳ ಧರ್ಮ, 'ಕಷ್ಟದಿಂದ ದುಡಿದ ಕಾಲಿಯ ಸೊಪ್ಪಾದರೂ ಲಿಂಗಾರ್ಪಿತವು ಎನ್ನುವ ಧರ್ಮ, ಕಟ್ಟಿಗೆ ಕಡಿಯುವವನಾಗಲಿ, ಚಪ್ಪಲಿಯನ್ನು ಹೊಲಿಯುವವನಾಗಲಿ, ಕಷ್ಟದಿಂದ ದುಡಿದ ಹಿಡಿ ಅನ್ನವೇ ಲೇಸೆಂದ ಬಸವಣ್ಣ' ಎನ್ನುವ ಧರ್ಮ ಪ್ರಪಂಚವೇ ಪಾರಮಾರ್ಥ ಮಾಡುವ ಧರ್ಮ.

ಶ್ರೀ ಸಾಮಾನ್ಯರ ಉದ್ಧಾರಕ್ಕಾಗಿಯೇ ಬಸವರು ಧರ್ಮಸ್ಥಾಪಿಸಿದರು, ಇದಕ್ಕಾಗಿ ಪಂಡಿತರು, ಜಗದ್ಗುರುಗಳು, ಮಹಾರಾಜರ ನೆರವನ್ನು ಅವರು ಅಪೇಕ್ಷಿಸಲಿಲ್ಲ, ಬಸವಣ್ಣನವರು ಭಾವನಾಜೀವಿಯಾಗಿರಲಿಲ್ಲ ಅವರು ವಿಚಾರವಾದಿ, ತರ್ಕ ಅಂತೆಕಂತೆಗಳ ಪ್ರತಿವಾದಕನಾಗಿರಲಿಲ್ಲ, ನುಡಿದಂತೆ ನಡೆಯುವ ಮಹಾನುಭಾವರಾಗಿದ್ದರು. ಅಂತೆಯೇ ಅವರನ್ನು ಬಾಗೇವಾಡಿಯ ಭಾಗ್ಯ ಬಸವಣ್ಣ, ಕಲ್ಯಾಣಕಿರಣ ಬಸವಣ್ಣ, ಭಾರತ ಬೆಳಕು ಬಸವಣ್ಣ, ಜಗಕ್ಕೆ ಜ್ಯೋತಿ ಬಸವಣ್ಣ ಎಂದ ಕೊಂಡಾಡಿ ಗೌರವಿಸುವುದು ಕನ್ನಡಿಗರ ಪಾಲಿಗೆ ಭೂಷಣವಾಗಿದೆ.



**ವೃಕ್ಷೋರಕ್ಷತಿ ರಕ್ಷಿತಃ**



**ಹಸಿರಿದ್ದರೆ ಉಸಿರು**
**ಹಸಿರಿದ್ದರೆ ಉಣಿಸು**
**ಹಸಿರಿದ್ದರೆ ಬೆಳೆಸು.**

**ಮರಗಿಡಗಳನ್ನು ಕಾಪಾಡಿರಿ**
**ಮಾನವ ಪರಿಸರವನ್ನು**
**ಕಾಪಾಡಿದಂತಾಗುತ್ತದೆ.**

# ದೂರ್ವಾಸನ ಕ್ರೋಧ

ವಿದ್ವಾನ್ ಬ. ನ. ಗುಂಡೂರಾವ್

ಆಕೆ ಶ್ರೀವಿದ್ಯಾ ಪಾರಂಗತಳು. ಜನ್ಮತಃ ಪಾವನ ಸಂಸ್ಕಾರ ಸಂಪನ್ನಳು. ಆಕೆಯ ಅನನ್ಯ ಸಾಧಾರಣ ಅಲೌಕಿಕ ಶಾಸ್ತ್ರಪಾಂಡಿತ್ಯಕ್ಕೆ ಜಗತ್ತು ತಲೆದೂಗಿತ್ತು. ಆಕೆಯ ಪ್ರಕಾಂಡ ಪಾಂಡಿತ್ಯದ ಮುಂದೆ ಆ ಕಾಲದ ಘಟಾನುಘಟಿಗಳಾದ ವಿದ್ವಾಂಸರು ನತಮಸ್ತಕ ರಾಗಿದ್ದರು. ಆಕೆ ಕೇವಲ ಒಂದು ಹೆಣ್ಣಲ್ಲ -- ಪ್ರತಿಭಾದೀಧಿತಿ -- ಎಂದೇ ಪ್ರಸಿದ್ಧಳಾಗಿದ್ದಳು. ಜಗದ್ವಿಖ್ಯಾತ ಕವಿಯಾದ ಭಾರವಿಯ ಏಕಮಾತ್ರ ಪುತ್ರಿಯಾದ ಆಕೆಯ ಹೆಸರು ಕಾತ್ಯಾಯನಿ. ಪ್ರಾಪ್ತ ವಯಸ್ಕಳಾದ ಮಗಳ ಮದುವೆಯ ಬಗ್ಗೆ ಭಾರವಿ ಯೋಚನೆ ಮಾಡುವುದು ಅಸಹಜವೇನಲ್ಲ. ಆದರೆ ಮದುವೆಯೆಂಬುದು ಕಾತ್ಯಾಯನಿಗೆ ಇಷ್ಟವಿತ್ತೇ?

"ಯಾರು ನನ್ನನ್ನು ವೇದಾಂತಚರ್ಚೆಯಲ್ಲಿ ಸೋಲಿಸುತ್ತಾರೆ, ನಾನು ಅವರನ್ನೇ ಲಗ್ನವಾಗುವುದು. ಇದು ನನ್ನ ಪ್ರತಿಜ್ಞೆ."

ಮಗಳ ಮಾತನ್ನು -- ದೃಢ ನಿರ್ಧಾರವನ್ನು -- ಕೇಳಿ, ತಂದೆ ಭಾರವಿ ಚಕಿತನಾದ.

"ವೇದಾಂತಚರ್ಚೆಗೂ -- ಮದುವೆಗೂ ಸಂಬಂಧವೇನು?" ತಂದೆ ಕೇಳಿದ.

ಮತ್ಸ್ಯಯಂತ್ರವನ್ನು ಹೊಡೆಯುವುದಕ್ಕೂಮದುವೆಗೂ ಸಂಬಂಧವೇನು? ಶಿವ ಧನುರ್ಭಂಗಕ್ಕೂ ಮದುವೆಗೂ ಸಂಬಂಧವೇನು?" ಮಗಳ ಮರುಪ್ರಶ್ನೆ.

"ಅದು ಬಾಹುಶಕ್ತಿಯ ಪ್ರಶ್ನೆ -- ಅಸ್ತ್ರವಿದ್ಯಾ ಕೌಶಲದ ಪ್ರಶ್ನೆ".

"ಇದು ಬುದ್ಧಿಶಕ್ತಿಯ ಪ್ರಶ್ನೆ -- ಪ್ರತಿಭಾಪಾಂಡಿತ್ಯ ಕೌಶಲದ ಪ್ರಶ್ನೆ".

"ಶಾಸ್ತ್ರಾರ್ಥದಲ್ಲಿ ನಿನ್ನನ್ನು ಸೋಲಿಸುವಂತಹವನು ಯಾರೂ ಬಾರದೇ ಇದ್ದರೆ -- ಸಿಕ್ಕದೇ ಇದ್ದರೆ.....".

"ಸಿಕ್ಕದೇ ಇದ್ದರೆ ತೊಂದರೆ ಇಲ್ಲ. ಬಾರದೇ ಇದ್ದರೆ ನಷ್ಟವಿಲ್ಲ. ನಾನು ಜೀವನ ಪರ್ಯಂತ ಅವಿವಾಹಿತಳಾಗೇ ಇರುತ್ತೇನೆ. ಮದುವೆ ಎನ್ನುವುದು ಅತ್ಯಗತ್ಯವಾದದ್ದೇನಲ್ಲ."

ಕಾತ್ಯಾಯನಿಯ ಮಾತು ಖಚಿತವಾಗಿತ್ತು.

ಭಾರವಿ ಚಿಂತಾಕ್ರಾಂತನಾದ. ಮಗಳನ್ನು ಏನಾದರೂ ಮಾಡಿ ಮದುವೆಗೆ ಒಪ್ಪಿಸಲೇಬೇಕು -- ಯಾವುದಕ್ಕೂ ಕಾಲ ಕೂಡಿ ಬರಬೇಕು.

ಹೀಗೇ ಕೆಲವು ದಿನಗಳುರುಳಿತು.

ಪುಣ್ಯವಶಾತ್, ಚರಣಾದ್ರಿಗಢಕ್ಕೆ-- ಭಾರವಿಯ ಮನೆಗೆ, ಒಬ್ಬ ಮಹಾತ್ಮರು ಬಂದರು. ಆತನ ಹೆಸರು ದೋಪದೇವ. ಕುಶಲ ಪ್ರಶ್ನೆಗಳ ಮಧ್ಯೆ ಭಾರವಿ ತನ್ನ ಮಗಳ ಸಂಗತಿಯನ್ನು ಮಹಾತ್ಮರಿಗೆ ಬಿನ್ನವಿಸಿದ. ತ್ರಿಕಾಲಜ್ಞಾನ ಸಂಪನ್ನನಾದ ದೋಪದೇವ -- ಕ್ಷಣಕಾಲ ಯೋಚಿಸಿ ಹೇಳಿದ--

"ಭಾರವಿ, ನಿನ್ನಮಗಳು ಸಾಮಾನ್ಯ ಕನ್ಯೆಯಲ್ಲ. ಅವಳ ಮದುವೆಯ ಯೋಚನೆ ಬಿಟ್ಟು ಬಿಡು. ಅವಳು ಅವಿವಾಹಿತಳಾಗೇ ಇರುತ್ತಾಳೆ. ನಾನು ಕೆಲವು ದಿನಗಳ ನಂತರ ಪುನಃ ಇಲ್ಲಿಗೆ ಬರುತ್ತೇನೆ. ಆಗ ಆಕೆಯೊಡನೆ ನಾನು ಶಾಸ್ತ್ರವಾದಕ್ಕೆ ಸಿದ್ಧನಾಗೇ ಬರುತ್ತೇನೆ. ಆದರೆ ನಾನಾಕೆಯನ್ನು ಮದುವೆಯಾಗುವುದಿಲ್ಲ.

ಸಮುಚಿತ ಉಪಚಾರವನ್ನು ಸ್ವೀಕರಿಸಿ ದೋಪದೇವ ಹೊರಟುಹೋದರು.

ಕಾತ್ಯಾಯಿನಿ ಆ ಕಾಲದ ಸರ್ವಶ್ರೇಷ್ಠ ವಿದುಷಿಯಷ್ಟೇ ಅಲ್ಲ. ಅನುಪಮ ಸುಂದರಿಯೂ ಹೌದು. ಪಾಂಡಿತ್ಯದಿಂದ ಅವಳ ಸೌಂದರ್ಯ ಮತ್ತಷ್ಟು ಹೆಚ್ಚಿತ್ತು. ತಂದೆ ಮಗಳು, ದೋಪದೇವನ ಆಗಮನವನ್ನೇ ನಿರೀಕ್ಷಿಸುತ್ತಿದ್ದರು.

ಅಂದು ಮಾಘಶುದ್ಧ ಪೂರ್ಣಿಮೆ. ತೇಜಸ್ವಿಯಾದ ದೋಪದೇವ -- ತನ್ನ ಮಾತಿನಂತೆ -- ಬಂದ. ಸ್ವಾಗತ -- ಸತ್ಕಾರ -- ಊಟ -- ಉಪಚಾರ ಎಲ್ಲವೂ ಸಾಂಗವಾಗಿ ನಡೆಯಿತು. ನಂತರ ಬಂತು ಚರ್ಚೆಯ ಪ್ರಸ್ತಾಪ.

"ನಾನು ಕೇಳುವ ಪ್ರಶ್ನೆಗಳಿಗೆ ಶಾಸ್ತ್ರ ಸಮ್ಮತವಾಗಿ ಸೂಕ್ತ ಉತ್ತರ -- ಸಮಾಧಾನ ನೀಡುವ ಕೃಪೆ ಮಾಡೋಣವಾಗಬೇಕೆಂದು ಭವದೀಯ ಶ್ರೀ ಚರಣಗಳಲ್ಲಿ ವಿನಂತಿ ಮಾಡಬಯಸುತ್ತೇನೆ."

ಕಾತ್ಯಾಯಿನಿಯ ಮಾತಿನ ಧಾಟಿಗೆ ಆತ ಮುಗುಳುನಗೆ ಬೀರಿದ.

"ಸೃಷ್ಟಿಯ ಮೂಲತತ್ವಯಾವುದು? ಆ ಮೂಲ ತತ್ವದ ಧ್ವನ್ಯಾತ್ಮಕ ಹಾಗೂ ವರ್ಣಾತ್ಮಕ ಕ್ರಿಯೆಗಳಲ್ಲಿ ಪ್ರಕೃತಿ ವಿಕೃತಿಗಳ ಸ್ವರೂಪ ಹೇಗೆ ಗೋಚರವಾಗುತ್ತದೆ?"

"ಯಾವುದನ್ನು ಆದ್ಯಾಶಕ್ತಿ -- ಅವ್ಯಕ್ತ -- ಅನಂ -- ಎಂದು ಶ್ರುತಿಸ್ಮೃತಿಗಳು ಉಲ್ಲೇಖಿಸುತ್ತವೆ ಅದೇ ಸೃಷ್ಟಿಗೆ ಮೂಲ. ಈ ಅವ್ಯಕ್ತವಸ್ತುವನ್ನು ವ ಗೊಳಿಸುವುದಕ್ಕಾಗಿಯೇ ಆಗಮಶಾಸ್ತ್ರವಿರುವುದ ಸೃಷ್ಟಿ ವಿಧಾಯಿನಿ ಶಕ್ತಿಯನ್ನು ಭಟ್ಟಾರಿಕಾ, ತ್ರಿಪ ಸುಂದರಿ -- ಶ್ರೀಲಲಿತಾ......ಇತ್ಯಾದಿ ಹೆಸರುಗಳಿಂ ಕರೆದಿದ್ದಾರೆ."

"ತಮ್ಮ ಉತ್ತರದಿಂದ ನನಗೆ ಸಂಪೂರ್ಣ ಸಮ ಧಾನವಾಗಿದೆ. ನಾನು ತಮ್ಮಿಂದ ಪರಾಜಿತಳಾ ದ್ದೇನೆ. ಆದ್ದರಿಂದ ತಾವು ನನ್ನನ್ನು ಲಗ್ನವಾಗಬೇಕ

"ಅದು ಅಸಂಭವ ಕಾತ್ಯಾಯನಿ...."

"ಏಕೆಂದು ಕೇಳಬಹುದೇ?"

"ನನ್ನ ಸರ್ವಸ್ವವೂ ಧೇನುಪಾಲ ವೇಣುಲೋ ಲನ ಚರಣಗಳಲ್ಲಿ ಸಮರ್ಪಿತ. ನಾನು ಆ ವಸ್ತು--ನಿಮ್ಮತಂದೆ ನಿರ್ಣಯಿಸುವಾತನನ್ನು ನೀ ಮದುವೆಯಾಗು"

"ನನಗೂ ಆ ಗೋಪೀಲೋಲನ ಬಗ್ಗೆ ತಿಳಿ ನಾನಾತನನ್ನೇ ಒಲಿಸಿಕೊಳ್ಳುತ್ತೇನೆ."

"ತುಂಬ ಸಂತೋಷ. ನೀನದಕ್ಕೆ ದೇಕ ಅರ್ಹತೆಯನ್ನು ಪಡೆದಿರುವೆ. ನೀನಾರು ಗೊ ಮಹರ್ಷಿ ದೂರ್ವಾಸನ ಕ್ರೋಧವೇ ನೀನು. ನಿನ್ನ ಆತ ಅಂಬರೀಷನ ಮೇಲೆ ಪ್ರಯೋಗಿಸಿದ. ಶ್ರೀ ಆಗ ನಿನ್ನನ್ನು ಸುದರ್ಶನ ಚಕ್ರದಿಂದ ನಿಗ್ರಹಿಸಿ - ಭಕ್ತವರ ಅಂಬರೀಷನನ್ನು ರಕ್ಷಿಸಿದ. ಭಕ್ತನ ಮೇ ಆಕ್ರಮಣ ಮಾಡಹೊರಟಿಯಾದ್ದರಿಂದ ನಿನಗೆ ಮಾನವಲೋಕದಲ್ಲಿ ಜನ್ಮ ಪಡೆಯಬೇಕಾಯ

ಕಾತ್ಯಾಯನಿ ಕಂಬನಿ ಧಾರೆಯಿಂದ ದೋಪ ವನ ಪಾದ ತೊಳೆಯುವಂತೆ ಆತನ ಚರ ಳಲ್ಲಿ ನತಮಸ್ತಕಳಾದಳು. ಆತ ಸಾಂತ್ವನದ ಮ ಗಳನ್ನು ಹೇಳಿ, ಸಮಾಧಾನ ಪಡಿಸಿ ಹೊ ಹೋದ. ಕಾತ್ಯಾಯನಿಯ ಪಾಂಡಿತ್ಯದ ಅಹ ರದ ಸ್ಥಾನದಲ್ಲೀಗ ಕೃಷ್ಣಭಕ್ತಿ ನೆಲೆಸಿತು. ಕೃಷ್ಣನ ಪಾದ ಸ್ಪರ್ಶದಿಂದ ಪುನೀತವಾದ ಬೃ

# ತಿರುಮಲೆ ತಿರುಪತಿ ದೇವಸ್ಥಾನಗಳು --- ತಿರುಪತಿ

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

"ಸ್ವಲ್ಪವೇ ಸಂಪದವನ್ನು ನೀಡಿರಿ, ದೈವಿಕ ಫಲವನ್ನು ಪಡೆಯಿರಿ".

ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಾದ ತಿರುಮಲೆ ಕಲಿಯುಗ ವೈಕುಂಠವಾಗಿದ್ದು, ದಿನವೂ ಸಹಸ್ರಾರು ಮಂದಿ ಯಾತ್ರಿಕರು ಸ್ವಾಮಿ ದರ್ಶನಕ್ಕಾಗಿ ಆಗಮಿಸುತ್ತಾರೆ. ದಿನದಿನವೂ ಹೆಚ್ಚುತ್ತಿರುವ ಯಾತ್ರಿಕ ಸಂದಣಿಯ ವಸತಿ ಸೌಲಭ್ಯಗಳ ಏರ್ಪಾಡಿಗಾಗಿ ತಿ.ತಿ.ದೇ. ಗಳು ಸುಸಜ್ಜಿತ ಅತಿಥಿಗೃಹಗಳನ್ನೂ, ಈಗಿರುವ ಕಾಟೇಜುಗಳ ಮೇಲೆ ಮೊದಲ ಅಂತಸ್ತು ಕೊಠಡಿಗಳನ್ನೂ, ಸಪ್ತಗಿರಿ ಸತ್ರಗಳ ಕೋಣೆಗಳನ್ನೂ ದಾನಯೋಜನೆಯಲ್ಲಿ ನಿರ್ಮಿಸುತ್ತಿದೆ. ತಿರುಮಲೆಯಲ್ಲಿ ವರ್ಷಪೂರ್ತಿ ಸೇರುವ ಯಾತ್ರಿಕ ಸಂದೋಹದ ಸೇವೆಯಲ್ಲಿ ಪಾಲುಗೊಳ್ಳಲು ಭಕ್ತದಾನಿಗಳಿಗೆ ಇದೊಂದು ಸದವಕಾಶ.

## 1. ಮೊದಲ ಅಂತಸ್ತು :

ತಿರುಮಲೆಯ ಆಳ್ವಾರ್ ಟ್ಯಾಂಕ್, ಮಂಗಳಬಾವಿ, ಶಂಕುಮಿಟ್ಟ, ಶೇಷಾದ್ರಿನಗರ, ಅಂಜನಾದ್ರಿನಗರ, ಗರುಡಾದ್ರಿನಗರ ಕಾಟೇಜುಗಳಲ್ಲಿ -- (ಸಿ ಹಾಗೂ ಡಿ ಭಾಗಗಳು) (ನೆಲ ಅಂತಸ್ತಿನಲ್ಲಿರುವ ಎ ಹಾಗೂ ಬಿ ಭಾಗಗಳಲ್ಲಿ ಮೇಲೆ) -- ೨೦೦ ಮೊದಲ ಅಂತಸ್ತು ಕಾಟೇಜುಗಳನ್ನು ನಿರ್ಮಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದ್ದು ಎ.ಟಿ.ಸಿ., ಎಂ.ಬಿ.ಸಿ., ಎಸ್.ಎಂ.ಸಿ., ಎಸ್.ಎನ್.ಸಿ., ಗಳಲ್ಲಿ ನೂರು ಕಾಟೇಜುಗಳ ಮೊದಲ ಅಂತಸ್ತು ನಿರ್ಮಾಣ ಪೂರ್ತಿಯಾಗಿ, ದಾನಿಗಳಿಗೆ ನೀಡಲಾಗಿದೆ. ಎ.ಎನ್.ಸಿ., ಜಿ.ಎನ್.ಸಿ. ಗಳಲ್ಲಿನ ನೂರು ಮೊದಲ ಅಂತಸ್ತು ಕಾಟೇಜುಗಳು ನಿರ್ಮಾಣ ಪೂರ್ಣಗೊಳ್ಳುವ ಹಂತದಲ್ಲಿವೆ. ಇವು ತಿರುಮಲೆಯ ಟಿ. ಬಿ. ಶಂಕು, ಚಕ್ರ, ನಾಮಗಳ ಬಳಿಯಿವೆ. ನೆಲ ಅಂತಸ್ತಿನ ಎ. ಹಾಗೂ ಬಿ. ಕಾಟೇಜುಗಳು, ಮೇಲೆ ಸಿ. ಹಾಗೂ ಡಿ. ಕಾಟೇಜುಗಳು ಪ್ರತಿಯೊಂದೂ ಎರಡು ಕೋಣೆಗಳನ್ನು ಹೊಂದಿ (೯೭೨ ಚದರಡಿ ಹಾಗೂ ೧೧೧೨ ಚದರಡಿ) ಸ್ನಾನ ಶೌಚಗೃಹಗಳನ್ನೊಳಗೊಂಡಿರುತ್ತವೆ.

ರೂ. ೧.೫ ಲಕ್ಷ ರೂಗಳನ್ನು ನೀಡುವುದರಿಂದ ದಾನಿಯು ಒಂದು ಮೊದಲ ಅಂತಸ್ತಿನ ಕಾಟೇಜುಗಳನ್ನು ತಮ್ಮ (ತಮ್ಮ ಸಂಸ್ಥೆ, ಟ್ರಸ್ಟ್, ಕಂಪನಿ) ಹೆಸರಿನಲ್ಲಿ ದಾನ ಮಾಡಬಹುದು.

## ರಾಮಬಗೀಚ ಅತಿಥಿ ಗೃಹಗಳು :

ಪ್ರತಿಯೊಂದು ಅಂತಸ್ತಿನಲ್ಲೂ ೫೦ ಸೂಟ್‌ಗಳಂತೆ ಮೂರು ಅಂತಸ್ತುಗಳಲ್ಲಿ ಒಟ್ಟು ೧೫೦ ಸೂಟ್‌ಗಳಿರುವ ಮೂರು ಅತಿಥಿಗೃಹಗಳನ್ನು ನಿರ್ಮಿಸಲು ಯೋಜಿಸಲಾಗಿದ್ದು ಅತಿಥಿಗೃಹ ೧ ರಲ್ಲಿ ೧೦೮ ಸೂಟ್‌ಗಳನ್ನು ನಿರ್ಮಿಸಿ ದಾನಿಗಳಿಗೆ ನೀಡಲಾಗಿದೆ. ಅತಿಥಿಗೃಹ ೨ ರಲ್ಲಿ ೧೫೦ ಸೂಟ್‌ಗಳನ್ನು ನಿರ್ಮಿಸಿ ೫೮ ಸೂಟ್‌ಗಳನ್ನು ದಾನಿಗಳಿಗೆ ನೀಡಲಾಗಿದೆ. ಇಲ್ಲಿನ ಮಿಕ್ಕ ೯೨ ಸೂಟ್‌ಗಳೇ ಅಲ್ಲದೆ ಅತಿಥಿಗೃಹ -- ೩ ರಲ್ಲಿನ ೧೫೦ ಸೂಟ್‌ಗಳು ನಿರ್ಮಾಣದ ಕೊನೆಯ ಹಂತದಲ್ಲಿವೆ.

ಈ ಮೂರು ಅತಿಥಿಗೃಹಗಳು ದೇವಾಲಯದ ಎದುರಿಗೆ ಅರ್ಧ ಫರ್ಲಾಂಗ್ ದೂರದಲ್ಲಿ ಬೇಡಿ ಆಂಜನೇಯಸ್ವಾಮಿ ದೇವಾಲಯದ ಹಿಂಭಾಗದಲ್ಲಿ ನೂತನ ಆಸ್ಥಾನ ಮಂಟಪದ ಪಕ್ಕದಲ್ಲಿವೆ. ಪ್ರತಿ ಸೂಟ್‌ನ ಪ್ಲಿಂತ್ ಏರಿಯಾ ೪೪.೫ ಚದರಮೀಟರ್ ಆಗಿದ್ದು (ಸ್ನಾನ ಶೌಚಗೃಹಗಳೊಡನೆ), ಸಾಮಾನ್ಯ ಅಂಗಳವಿದೆ.

ರೂ. ೬೦,೦೦೦ ಮೊತ್ತದ ದಾನದಿಂದ ಒಂದು ಸೂಟ್ ಅನ್ನು ದಾನಿಗಳು ತಮ್ಮ ತಮ್ಮ ಹೆಸರಿನಲ್ಲಿ ನೀಡಬಹುದು.

## ೩. ಸಪ್ತಗಿರಿ ಸತ್ರಗಳು :

ಒಂದು ಕೇಂದ್ರ ವಿಭಾಗದ ಸುತ್ತ ೯ ವಿಭಾಗಗಳಿರುವಂತಹ ಒಂದು ಮಹತ್ ಯೋಜನೆಯನ್ನು ತಿ.ತಿ.ದೇ. ಆರಂಭಿಸಿದೆ. ೧ ಹಾಗೂ ೯ ನೇ ವಿಭಾಗಗಳು ಪ್ರವೇಶ ಹಾಗೂ ಉಪಹಾರಗೃಹಗಳಿಗಾಗಿ. ಕೇಂದ್ರ ವಿಭಾಗವು ಅಷ್ಟ ಮುಖಗಳ ಅಂಗಳವನ್ನು ಹೊಂದಿದ್ದು ಎಂಟು ಮುಖಗಳಲ್ಲೂ ಒಂದೊಂದು ವಿಭಾಗ ನಿರ್ಮಾಣವಾಗುವುದು. ಯಾವುದೇ ವಿಭಾಗಕ್ಕೂ ೧ನೇ ವಿಭಾಗದಿಂದ ಪ್ರವೇಶ. ಮಿಕ್ಕ ವಿಭಾಗಗಳು -- ೨ ರಿಂದ ೮ (ಒಟ್ಟು ೭ ವಿಭಾಗ)-- ೯೫೪ ಕೋಣೆಗಳನ್ನು ಹೊಂದಿದ್ದು ೧೧ ಕೋಣೆಗಳು ಆಡಳಿತ ನಿರ್ವಹಣೆಗಾಗಿದ್ದು ಮಿಕ್ಕ ೯೪೩ ಕೋಣೆಗಳನ್ನು ಯಾರಿಕರಿಗೆ ನೀಡಲಾಗುವುದು. ಮೊದಲ ಹಂತದಲ್ಲಿ ೨ ಹಾಗೂ ೩ನೇ ವಿಭಾಗಗಳ (೧೦೮ + ೧೪೯) ೨೫೭ ಕೋಣೆಗಳ ನಿರ್ಮಾಣವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸುವ ಹಂತದಲ್ಲಿದೆ. ಪ್ರತಿ ಕೋಣೆಯ ವಿಸ್ತೀರ್ಣ (ಸ್ನಾನ ಶೌಚಗಳೊಂದಿಗೆ) ೧೨'+೧೪'. ರೂ. ೪೦,೦೦೦ ಗಳ ದಾನದಿಂದ ದಾನಿಯು ತಮ್ಮ ಹೆಸರಿನಲ್ಲಿ ಕೋಣೆಯನ್ನು ನೀಡಬಹುದು. ಈ ವರೆಗೆ ೮೦ ಕೋಣೆಗಳಿಗಾಗಿ ಆಂಶಿಕ ಹಾಗೂ ಪೂರ್ಣ ದಾನಗಳನ್ನು ಸ್ವೀಕರಿಸಲಾಗಿದೆ. ಎರಡನೇ ವಿಭಾಗದ ಶೀಘ್ರ ಪೂರ್ಣತೆಯ ಬಳಿಕ ಅದನ್ನು ನೀಡಲಾಗುವುದು.

## ೪. ಶೇಷಾದ್ರಿನಗರ ಅತಿಥಿಗೃಹ2 :

ಎರಡಂತಸ್ತಿನ ಈ ಅತಿಥಿಗೃಹದಲ್ಲಿ ೨೬ ಸೂಟ್‌ಗಳಿದ್ದು (ಪ್ರತಿ ಅಂತಸ್ತಿಗೆ ೧೩ ಸೂಟ್‌ಗಳು) ಯಾತ್ರಿಕರಿಗೆ ಬಾಡಿಗೆಯ ಮೇಲೆ ನೀಡಲಾಗುತ್ತದೆ. ಪ್ರತಿ ಸೂಟ್ ೪.೨ ಮೀ X ೪.೨ ಮೀ ಇರುತ್ತದೆ.

ಇಡೀ ಅತಿಥಿಗೃಹಕ್ಕಾಗಿ ಅಥವಾ ಪ್ರತಿ ಅಂತಸ್ತಿಗಾಗಿ ದಾನಗಳಿಗೆ ಆದ್ಯತೆ ನೀಡಲಾಗುವುದು.

೨೫ ಲಕ್ಷ ರೂಗಳ ದಾನದಿಂದ ವ್ಯಕ್ತಿ, ವ್ಯಕ್ತಿಗಳು ಸಂಸ್ಥೆ, ಕಂಪನಿ, ಟ್ರಸ್ಟ್, ಇಡೀ ಅತಿಥಿಗೃಹದ ದಾನಿಗಳಾಗಲು ಸಾಧ್ಯ

ದಾನಿಗಳಿಗೆ ಸೌಲಭ್ಯಗಳು :--- ದಾನಿಗಳು ತಮ್ಮ ಜೀವನಾವಧಿಯಲ್ಲೂ, ಕಂಪನಿ, ಇತ್ಯಾದಿಗಳು ೧೫ ವರ್ಷಗಳೂ ವರ್ಷಕ್ಕೆ ೬೦ ದಿನ (ಒಮ್ಮೆ ೧೦ ದಿನಗಳಿಗೆ ಮೀರದಂತೆ) ತಮ್ಮ ದಾನದ ಕಾಟೇಜು, ಸೂಟು, ಕೋಣೆಗಳಲ್ಲಿ ನಾಮಮಾತ್ರಸೇವಾ ಶುಲ್ಕದಿಂದ ಇರಬಹುದು. ದಾನಿಗಳ ಹೆಸರು ವಿಳಾಸಗಳನ್ನು ಶಿಲಾಫಲಕದಲ್ಲಿ ಕೆತ್ತಿಸಿ ದಾನದ ಕೊಠಡಿ, ಸೂಟ್‌ಗಳಲ್ಲಿ ಪ್ರದರ್ಶಿಸಲಾಗಿರುವುದು.

ಮಿಕ್ಕ ವಿವರಗಳಿಗಾಗಿ ಕೂಡಲೇ ಬರೆಯಿರಿ : **ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ.**

ವನಕ್ಕೆ ಪಯಣದೆಳೆಸಿದಳು. ಸ್ವಾಮಿಯ ದರ್ಶನಕ್ಕೆಂದು ಆ ಜೀವ ಹಗಲು ರಾತ್ರಿ ಪರಿತಪಿಸಿತು. ಒಂದು ಶುಭ ಮುಹೂರ್ತದಲ್ಲಿ ಆಕೆಗೆ ಅಲ್ಲಿ ಪುನಃ ಬೋಪದೇವರ ದರ್ಶನವಾಯ್ತು. ತನ್ನ ಸಂಕಟವೆಲ್ಲ ಆತನಲ್ಲಿ ಹೇಳಿಕೊಂಡಳು. ಆತ ಕೃಪೆಮಾಡಿ ರಾಮ ತಾರಕಮಂತ್ರ ಉಪದೇಶಿಸಿದ.

ಕಾತ್ಯಾಯಿನಿ ಸಕ್ರಮವಾಗಿ ತಾರಕಮಂತ್ರವನ್ನು ಜಪಿಸಿ ಧನ್ಯಳಾದಳು. ಮೂಲಾಧಾರವೇ ಮುಂತಾದ ಸಪ್ತಚಕ್ರಗಳಲ್ಲೂ ಧ್ಯೇಯಮೂರ್ತಿಯ ದರ್ಶನ ಭಾಗ್ಯ ದೊರೆಯಿತು.

ಭಜಗೋವಿಂದಂ ರಾಧಾಸಹಿತಂ --ಎಂದು ತನ್ನ ಸುಮಧುರ ಕಂಠದಿಂದ ಆಕೆ ಹಾಡುತ್ತಿದ್ದರೆ ಯಮುನಾತೀರದ ಗಿಡಮರಗಳು -- ಖಗಕುಲ -- ಪುಷ್ಪಸಂದೋಹ --ಎಲ್ಲವೂ ಭಾವಪುಲಕಿತ ವಾಗುತ್ತಿತ್ತು. ವಾತಾವರಣವೆಲ್ಲ ಯಾವುದೊ ದೈವೀಭಾವದಿಂದ ಮುಖರಿತವಾಗುತ್ತಿತ್ತು.

ಒಂದು ಶರದ್ರಾತ್ರಿ -- ಸಾಂದ್ರ ಚಂದ್ರಿಕಾಸ್ನಾತ ಯಮುನಾತರಂಗಿಣಿ ವೀಣೆ ನುಡಿದಂತೆ ಮೃದು ಮಧುರ ಮಂಜುಳ ಗಾನ ಮಾಡುತ್ತ ಹರಿಯುತ್ತಿದೆ. ಚಂದ್ರ ಕುಸುಮ ಬಾಲೆಯರಿಗೆಲ್ಲ ಕಚಗುಳಿ ಇಟ್ಟು ನಗಿಸುತ್ತಿದ್ದಾನೆ. ಇದೇ ಪ್ರದೇಶದಲ್ಲಿ ತಾನೆ ದ್ವಾಪರ ಯುಗದಲ್ಲಿ ಜಗನ್ಮೋಹಕ ಮುರಳೀವಾದನ ನಡೆದದ್ದು!! ಈ ಪ್ರದೇಶದಲ್ಲೇ ತಾನೆ ರಾಸಲೀಲಾ ವೈಭವ ನಡೆದದ್ದು!! ಈ ಪ್ರದೇಶದಲ್ಲೇ ತಾನೆ ಕಾಳೀಯಫಣಮಾಣಿಕ್ಯ ರಂಜಿತ ಶ್ರೀಪದಾಂಬುಜವನ್ನು ಗೋಕುಲದ ಜನ ದರ್ಶಿಸಿ ಧನ್ಯವಾದದ್ದು!!

ಕಾತ್ಯಾಯನಿಯ ಮುಂದೆ ದ್ವಾಪರದ ವೈಭವವೆಲ್ಲ ಚಿತ್ರಪಟದಂತೆ ಸುಳಿದುಹೋಯ್ತು -- ದೂರದಲ್ಲೊಂದು ಕೈಎತ್ತರದ ಮಂದಾರ -- ಅದರ ಕೆಳಗೆ ತ್ರಿಭಂಗಿಯಲ್ಲಿ ನಿಂತ ಬಾಲಗೋಪಾಲ. ಆ ರೂಪ ಮಾಧುರ್ಯ ಅನಿರ್ವಚನೀಯ. 'ನಾಮಸಮೇತಂ ಕೃತಸಂಕೇತಂ ವಾದಯತೇ ಮೃದುವೇಣುಮ್'. ವೇಣುನಾದದಲ್ಲಿ ಹೆಸರು ಹಿಡಿದು ಕರೆಯುತ್ತಿದ್ದಾನೆ. ಇದು ಅರ್ಥವಾಗುವುದು ಕಾತ್ಯಾಯನಿಗೆ ಮಾತ್ರ. ಆಕೆ ಯದುನಾಥನತ್ತ ಧಾವಿಸಿಹೋದಳು. ಆ ಸೌಂದರ್ಯದಲ್ಲಿ ಕರಗಿಹೋದಳು. ಶಿಖಿಪಿಂಛ ವಿಭೂಷಿತ ನರಾಕಾರದ ಕರೆಗೆ ಓ ಗೊಡುವ ಭಾಗ್ಯ ಬಂದಂದು ನರಲೋಕದ ಬಾಳು ಧನ್ಯವೆಂಬುದಕ್ಕೆ ಇದಕ್ಕಿಂತ ಬೇರೆ ಉದಾಹರಣೆಬೇಕೆ? ಎಂಬಂತೆ ಮಂದಾರ ವೃಕ್ಷದ ಮೇಲೆರಡು ಗಿಣಿಗಳು ಗುಸುಗುಸು ಮಾತಾಡುತ್ತಿದ್ದವು.

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಡಿ.ವಿ.ಎಲ್.ಎನ್. ಮೂರ್ತಿ, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡಿವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ ೧೯೮೫ ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತರ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ. ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. ೧೦೦೦:- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿ:
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿ:

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ ಹಾಗಾಗಿ ಅನ್ನದಾನ ಮಾಡಬೇಕು.

-ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ ತಮ್ಮ ವಿಶ್ವಾಸಿ,

( ಡಿ.ವಿ.ಎಲ್.ಎನ್. ಮೂರ್ತಿ, ಐ.ಎ.ಎಸ್.)

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ ೫-೦೦ | ಪ್ರಾ ೫-೩೦ |
| ವಿಶ್ವರೂಪ ಸರ್ವದರ್ಶನ. | ಪ್ರಾ ೫-೩೦ | ಪ್ರಾ ೭-೦೦ |
| ತೋಮಾಲ ಸೇವೆ (ಆರ್ಜಿತ) | ಪ್ರಾ ೭-೩೦ | ಪ್ರಾ ೮-೦೦ |
| ಅರ್ಚನೆ (ಆರ್ಜಿತ) | ಪ್ರಾ ೮-೦೦ | ಪ್ರಾ ೮-೩೦ |
| ಸರ್ವದರ್ಶನ | ಪ್ರಾ ೯-೦೦ | ಮ ೧೨-೩೦ |
| | ಮ. ೧-೦೦ | ಸಂ. ೬-೦೦ |
| | ರಾ ೭-೦೦ | ರಾ ೮-೪೫ |
| ಏಕಾಂತಸೇವೆ | | ರಾ ೯-೦೦ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ ೫-೩೦ ರಿಂದ ಪ್ರಾ ೬-೩೦ ರ ವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | |
|---|---|
| ೧. ಗರುಡವಾಹನ | ೩೨-೦೦ |
| ೨. ಚಂದ್ರಪ್ರಭ ವಾಹನ | ೩೨-೦೦ |
| ೩. ಗಜವಾಹನ | ೩೨-೦೦ |
| ೪. ಅಶ್ವವಾಹನ | ೩೨-೦೦ |
| ೫. ಸಿಂಹವಾಹನ | ೩೨-೦೦ |
| ೬. ಹಂಸವಾಹನ | ೩೨-೦೦ |
| ೭. ಚಿಕ್ಕಶೇಷವಾಹನ | ೩೨-೦೦ |
| ೮. ದೊಡ್ಡ ಶೇಷವಾಹನ | ೬೨-೦೦ |
| ೯. ಸೂರ್ಯಪ್ರಭವಾಹನ | ೬೨-೦೦ |

### ಪಡಿಪ್ರಸಾದಗಳು

| | |
|---|---|
| ೧. ದೋಸೆ ಕಾಲಸೋಲ | ೩೫-೦೦ |
| ೨. ದಧ್ಯೋದನ " | ೪೦-೦೦ |
| ೩. ಪ್ರಳಿಯೋಗರೆ " | ೫೦-೦೦ |
| ೪. ಪೊಂಗಲು " | ೫೫-೦೦ |
| ೫. ಸಕ್ಕರಪೊಂಗಲ್ " | ೬೫-೦೦ |
| ೬. ಶಾಕರ ಭಾತ್ " | ೮೫-೦೦ |
| ೭. ಕೇಸರಿಭಾತ್ " | ೯೦-೦೦ |
| ೮. ಸೀರ " | ೧೫೫-೦೦ |

ವಿವರಗಳಿಗೆ:
**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

# ವಾರ್ತಾಲಹರಿ

## ವಿಶೇಷ ಪ್ರಾಧಿಕಾರದ ನಿರ್ಣಯಗಳು

ತಿರುಮಲೆ ತಿರುಪತಿ ದೇವಸ್ಥಾನದ ವಿಶೇಷ ಪ್ರಾಧಿಕಾರ (ಸ್ಪೆಸಿಫೈಡ್ ಅಥಾರಿಟಿ) 28-3-93 ರಂದು ತಿರುಮಲೆಯಲ್ಲಿ ಆಂಧ್ರಪ್ರದೇಶ ಸರ್ಕಾರದ ಮುಖ್ಯಕಾರ್ಯದರ್ಶಿ ಶ್ರೀ ಎಂ. ಎಸ್. ರಾಜಾಜಿ ಅವರ ಅಧ್ಯಕ್ಷತೆಯಲ್ಲಿ ಸಭೆಸೇರಿ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯನ್ನು ಆರಂಭಿಸಲು ತೀರ್ಮಾನಿಸಿತು.

ತಿ.ತಿ.ದೇ.ಗಳ ಅರಣ್ಯಾಭಿವೃದ್ಧಿ ವಿಭಾಗದವರು ಕೈಗೊಂಡಿರುವ ಈ ಯೋಜನೆಯಲ್ಲಿ ಸಾರ್ವಜನಿಕರು ಪಾಲುಗೊಳ್ಳುವಂತೆ ವಿವಿಧ ಅನುದಾನ ವ್ಯವಸ್ಥೆಗಳನ್ನುಂಟುಮಾಡಲಾಗುವುದೆಂದು ತಿಳಿಸುತ್ತ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು, ಈ ಯೋಜನೆಯಲ್ಲಿ ಭಾಗವಹಿಸುವ ದಾನಿಗಳಿಗೆ ವರ್ಷಕ್ಕೊಮ್ಮೆ ತಿರುಮಲೆಯಲ್ಲಿ ಎರಡುದಿನ ಉಚಿತ ನಿವಾಸವನ್ನು ನೀಡಿ ಸ್ವಾಮಿಯ ವಿರಾಮಕಾಲ ದರ್ಶನದ ವ್ಯವಸ್ಥೆ ಮಾಡುವುದಾಗಿ ತಿಳಿಸಿದರು.

ಕಪಿಲೇಶ್ವರಸ್ವಾಮಿ ದೇವಾಲಯದಲ್ಲಿನ ಶ್ರೀ ಕಾಮಾಕ್ಷಿಅಮ್ಮನವರ ವಿಗ್ರಹದ ಕವಚವನ್ನು ಸುವರ್ಣಲೇಪನಗೊಳಿಸುವುದಾಗಿ ತಿಳಿಸಿದರು.

ಕಂಚಿಕಾಮಕೋಟಿ ಪೀಠಕ್ಕೆಅಸ್ಥಾನಿನ ಗವಪಾಟಿಯಲ್ಲಿ ಪ್ರಾರ್ಥನಾಮಂದಿರ ನಿರ್ಮಾಣಕ್ಕಾಗಿ ಹತ್ತು ಲಕ್ಷ ರೂಪಾಯಿಗಳ ನೆರವು ನೀಡಲು ತೀರ್ಮಾನಿಸಲಾಗಿದೆ ಎಂದು ಅವರು ತಿಳಿಸಿದರು. ವಿಖ್ಯಾತ ಗಾಯಕರು -- ಶ್ರೀಮತಿ ಎಂ. ಎಸ್. ಸುಬ್ಬಲಕ್ಷ್ಮಿ ಮೊದಲಾದವರಿಂದ ಅನ್ನಮಾಚಾರ್ಯರ ಕೃತಿಗಳ ಗಾಯನದ ಧ್ವನಿಸುರುಳಿಗಳನ್ನು ತಯಾರಿಸಿ ಬಿಡುಗಡೆ ಮಾಡಲಾಗುವುದು ಎಂದೂ ತಿಳಿಸಿದರು.

ಅನ್ನಮಾಚಾರ್ಯ ಪ್ರಾಜೆಕ್ಟ್‌ನ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಸ್ಥಳೀಯಕಲಾವಿದರಿಗೆ ಸ್ಥಳೀಯ ಕಾರ್ಯಕ್ರಮಗಳಿಗೆ ರೂ. 150/-- ಹೊರಗಡೆ ರೂ. 200/-- ಹಾಗೂ ಜಿಲ್ಲಾಕೇಂದ್ರಗಳಲ್ಲಿನ ಕಾರ್ಯಕ್ರಮಗಳಿಗೆ ರೂ. 250/-- ಸಂಭಾವನೆ ನೀಡಲು ತೀರ್ಮಾನಿಸಲಾಗಿದೆ.

ತಿರುಮಲೆಯ ದೇವಾಲಯದ ಪ್ರಸಾದವಾದ ಲಾಡುವಿನ ಗುಣಮಟ್ಟ ಹಾಗೂ ಪ್ರಮಾಣಗಳನ್ನು ಹೆಚ್ಚಿಸಲು ಕ್ರಮಗಳನ್ನು ಕೈಗೊಳ್ಳಲಾಗುವುದೆಂದು ಶ್ರೀಯುತರು ತಿಳಿಸುತ್ತ ತಿ.ತಿ.ದೇ. ಮಾಸಪತ್ರಿಕೆ ಸಪ್ತಗಿರಿಯ ಬೆಲೆಯನ್ನು ಒಂದು ರೂಪಾಯಿನಿಂದ ಎರಡು ರೂಪಾಯಿಗಳಿಗೆ ಏರಿಸಲು ತೀರ್ಮಾನಿಸಲಾಗಿದ್ದು, ಜಾಹೀರಾತುಗಳನ್ನು ಒಪ್ಪಿಕೊಳ್ಳಬಹುದೆಂದು ತೀರ್ಮಾನಿಸಲಾಯಿತು ಎಂದರು.

ತಿರುಪತಿ ಹಾಗೂ ತಿರುಮಲೆಗಳಲ್ಲಿನ ಆರೋಗ್ಯ ವಿಭಾಗದಲ್ಲಿ ಎಂಟು ಆರೋಗ್ಯ ಇನ್ಸ್‌ಪೆಕ್ಟರ್‌ಗಳ ಹುದ್ದೆಗಳನ್ನುಂಟುಮಾಡಲು ತೀರ್ಮಾನಿಸಲಾಯಿತೆಂದು ಕಾರ್ಯನಿರ್ವಹಣಾಧಿಕಾರಿಗಳು ತಿಳಿಸಿದ್ದಾರೆ. ಅತಿ ಪ್ರತಿಭಾವಂತ ಕ್ರೀಡಾಪಟುಗಳನ್ನು ಪ್ರೋತ್ಸಾಹಿಸಲು ತಿ.ತಿ.ದೇ. ಗಳಲ್ಲಿ ಕ್ರೀಡಾ ಮಾಸಲಾತಿಯನ್ನು ಆರಂಭಿಸಬೇಕೆಂದು ತೀರ್ಮಾನಿಸಲಾಯಿತು.

ಶ್ರೀ ಎಸ್. ವಿ. ಸಂಗೀತ ನೃತ್ಯ ಕಲಾಶಾಲೆಯಲ್ಲಿನ ವಿದ್ಯಾರ್ಥಿ ವೇತನಗಳನ್ನು ಹೆಚ್ಚಿಸಲು ತೀರ್ಮಾನಿಸಲಾಯಿತು. ನಾದಸ್ವರ, ಡೋಲು, ವಿಭಾಗದ ಸ್ಥಳೀಯ ವಿದ್ಯಾರ್ಥಿಗಳಿಗೆ ರೂ. ನಾಲ್ಕು ನೂರು ಹಾಗೂ ಸ್ಥಳೀಯರಲ್ಲದವರಿಗೆ ಐದು ನೂರು ರೂಪಾಯಿಗಳು ಗಾತ್ರಮತ್ತು ವಾದ್ಯ ವಿದ್ಯಾರ್ಥಿಗಳಿಗೆ ಇವು 300 ಹಾಗೂ 400 ಆಗಿರುವುದು ಎಂದೂ ಅವರು ವಿವರಿಸಿದರು.

## ಪುಸ್ತಕ ಬಿಡುಗಡೆ

ತಿ.ತಿ.ದೇ. ಗಳ ವಿಶೇಷ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಎಂ. ಎಸ್. ರಾಜಾಜಿ ಅವರು ಅನ್ನಮಾಚಾರ್ಯರ ಸಂಕೀರ್ತನೆಗಳ 32 ನೇ ಸಂಪುಟವನ್ನು (ಸಂ -- ದಿವಂಗತ ಶ್ರೀ ಗೌರಿಪೆದ್ದಿ ರಾಮಸುಬ್ಬಶರ್ಮ ಹಾಗೂ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿ) ಬಿಡುಗಡೆ ಮಾಡಿದರು. ಸರಳ ಸಮಾರಂಭವೊಂದರಲ್ಲಿ ಪುಸ್ತಕದೊಡನೆಯೇ ಶ್ರೀಯುತರು ಅನ್ನಮಯ್ಯ ಮಣಿದೀಪಾಲು, ಹಾಗೂ ಅನ್ನಮಯ್ಯ ಅನಂತರಾಗಾಲು ಎಂಬ ಎರಡು ಧ್ವನಿಸುರುಳಿಗಳನ್ನು ಬಿಡುಗಡೆ ಮಾಡಿದರು.

## ಹರಿಕಥಾಮೃತಸಾರ ಪಾರಾಯಣ

ರಾಯಚೂರು ಜಿಲ್ಲೆಯ ಮಾನ್ವಿಯಲ್ಲಿ ಈಚೆಗೆ ಎರಡು ದಿನಗಳ ಕಾಲ ಜಗನ್ನಾಥದಾಸರ ಹರಿಕಥಾಮೃತಸಾರದ ಸಾಮೂಹಿಕ ಪಾರಾಯಣಾ ಉತ್ಸವ ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್ ವತಿಯಿಂದ/ ಯಶಸ್ವಿಯಾಗಿ ನೆರವೇರಿಸಲ್ಪಟ್ಟಿತು.



ಕರ್ನಾಟಕದ ವಿವಿಧ ಸ್ಥಳಗಳಿಂದ -- ಹುಬ್ಬಳ್ಳಿ, ಗಂಗಾವತಿ, ರಾಯಚೂರು, ಕುಷ್ಟಗಿ, ಕಲ್ಲೂರು, ಸಿರಿಯಾಳ, ಬೆಂಗಳೂರು, ಮೈಸೂರು, ಮುದ್ಗಲ್, ಕೌತಾಳ (ಕರ್ನಾಟಕ) ಕೌತಾಳ (ಆಂಧ್ರಪ್ರದೇಶ) ಆದವಾನಿ, ಲಿಂಗಸೂಗೂರು, ಸಂತೆಕೆಲ್ಲೂರು, ಮಾನ್ವಿಗಳಿಂದ ನೂರ ಇಪ್ಪತ್ತು ಮಂದಿ ವಿದ್ವಾಂಸರು ಭಾಗವಹಿಸಿ ಈ ಸಾಮೂಹಿಕ ಪಾರಾಯಣವನ್ನು ಸಾರ್ಥಕಗೊಳಿಸಿದರು.

ಎರಡು ದಿನವೂ ಆದವಾನಿಯ ತೆಲುಗು ಪಂಡಿ



# ಶ್ರೀರಂಗಂ ಗೋಪಾಲರತ್ನಂ ನಿಧನ

ಖ್ಯಾತ ಗಾಯಕಿ ಸಂಗೀತ ವಿದುಷಿ ಶ್ರೀಮತಿ ಶ್ರೀರಂಗಂ ಗೋಪಾಲರತ್ನಂ ಅವರು ಮಾರ್ಚ್ 17 ರಂದು ತಮ್ಮ 54 ನೇ ವಯಸ್ಸಿನಲ್ಲಿ ಮದರಾಸಿನಲ್ಲಿ ನಿಧನರಾದರೆಂದು ತಿಳಿಸಲು ಸಪ್ತಗಿರಿ ವಿಷಾದಿಸುತ್ತದೆ.

ಶ್ರೀರಂಗಂ ಗೋಪಾಲರತ್ನಂ ಅವರು ಡಾ. ಶ್ರೀಪಾದ ಪಿನಾಕಪಾಣಿ ಅವರಲ್ಲಿ ಸಂಗೀತವನ್ನು ಕಲಿತು ವಿಜಯವಾಡದ ಆಕಾಶವಾಣಿಕೇಂದ್ರದಲ್ಲಿ ಬಹುಕಾಲ ಕೆಲಸಮಾಡಿದರು. ಹೈದರಾಬಾದಿನ ಸಂಗೀತ ಕಲಾಶಾಲೆಯ ಪ್ರಾಂಶುಪಾಲರಾಗಿಯೂ ಕೆಲಸಮಾಡಿದ ಅವರಿಗೆ ಪದ್ಮಶ್ರೀ ಪ್ರಶಸ್ತಿಯೂ ದೊರೆತಿದ್ದಿತು.

ಅನ್ನಮಾಚಾರ್ಯ ಸಂಕೀರ್ತನೆಗಳ ಪ್ರಸಾರದಲ್ಲಿಯೂ ಆಕೆಗೆ ವಿಶೇಷ ಆಸಕ್ತಿಯಿದ್ದು ಅವರು ಗಾಯನ ಮಾಡಿದ ಅನ್ನಮಾಚಾರ್ಯ ಕೃತಿಗಳ ಧ್ವನಿಸುರುಳಿಗಳು ಹೆಚ್ಚು ಜನಪ್ರಿಯವಾಗಿದ್ದವು.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ ತಿರುಚಾನೂರು

## ಪಡಿಪ್ರಸಾದಗಳ ದರಗಳು

| | | ರೂ./- |
|---|---|---|
| 1. ದೋಸೆ | ---- | 100--00 |
| 2. ದಧ್ಯೋದನ | ---- | 100--00 |
| 3. ಪುಳಿಯೋಗರ | ---- | 75--00 |
| 4. ಪೊಂಗಲು | ---- | 200--00 |
| 5. ಸಕ್ಕರೆ ಪೊಂಗಲು | ---- | 200--00 |
| 6. ಕೇಸರಿ ಭಾತ್ | ---- | 300--00 |
| 7. ಶಾಕರ ಭಾತ್ | ---- | 250--00 |
| 8. ಸೀರಾ | ---- | 400--00 |

ಭಕ್ತಾದಿಗಳು ಹೆಚ್ಚಿನ ವಿವರಗಳಿಗೆ ತಿ. ತಿ. ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**

ತರಾದ ಶ್ರೀ ಎಸ್. ನಾಗರಾಜ ಅವರು ವಿಜಯದಾಸ, ಗೋಪಾಲದಾಸ, ಜಗನ್ನಾಥದಾಸರುಗಳ ಪರಿಚಯವನ್ನು ಮಾಡಿಕೊಟ್ಟರು. ಮೊದಲದಿನ ರಾಯಚೂರಿನ ಶ್ರೀ ಮುರಳೀಧರಾಚಾರ್ಯ ಗಲಗಲಿಯವರು ಜಗನ್ನಾಥದಾಸರ ಹರಿಕಥಾಮೃತಸಾರದ ವೈಶಿಷ್ಟ್ಯವನ್ನು ವಿವರಿಸಿದರು. ಎರಡನೆಯ ದಿನ ರಾಯಚೂರಿನ ಶ್ರೀ ಕೃಷ್ಣಾಚಾರ್ಯ ಇನಾಮದಾರರು ಜಗನ್ನಾಥದಾಸರ ವೈಶಿಷ್ಟ್ಯವನ್ನು ವಿವರಿಸಿದರು.

ಮಾನವಿಯ ಪವನ ಭಜನಾ ಮಂಡಳಿಯವರು ಹಾಗೂ ರಾಯಚೂರಿನ ವಿಜಯವಿಠಲ ಭಜನಾಮಂಡಳಿಯವರು ಸಾಮೂಹಿಕ ಭಜನೆಗಳನ್ನು ನಡೆಸಿ ವಿವಿಧ ಹರಿದಾಸರ ಕೃತಿಗಳ ಗಾಯನದ ಮೂಲಕ ಭಗವತ್ ಹಿರಿಮೆಯನ್ನು ಸಾರಿದರು.

ತಿ.ತಿ.ದೇ.ಃ ದಾಸಸಾಹಿತ್ಯ ಪ್ರಾಜೆಕ್ಟ್ ಪರವಾಗಿ ಶ್ರೀ ಕೆ. ವಾದಿರಾಜಾರಾವ್ ಅವರು ಸಾಮೂಹಿಕ ಪಾರಾಯಣದಲ್ಲಿ ಭಾಗವಹಿಸಿ, ಶ್ರೀನಿವಾಸನ ವರ್ಣಚಿತ್ರಗಳನ್ನು ವಿದ್ವದ್ಗೋಷ್ಠಿಯಲ್ಲಿ ವಿತರಿಸಿದರು. ಸ್ಥಳೀಯ ಜಗನ್ನಾಥ ಮಂದಿರದ ಅರ್ಚಕರಾದ ಶ್ರೀ ಪತೀಂದ್ರಾಚಾರ್ ಅವರು ಹರಿಕಥಾಮೃತಸಾರ ಪಾರಾಯಣಾ ಉತ್ಸವವನ್ನು ನಡೆಸುವಲ್ಲಿ ಹೃತ್ಪೂರ್ವಕ ಸಹಕರಿಸಿದರು. ರಾಯಚೂರಿನ ಶ್ರೀ ವಿಜಯಾಶ್ರಮದ ಶ್ರೀ ರಾಮಾಚಾರ್ಯ ಶಿರವಾರ ಅವರು ಹರಿಕಥಾಮೃತಸಾರದ ಸಾಮೂಹಿಕ ಪಾರಾಯಣ ಉತ್ಸವದ ನೇತಾರರಾಗಿ ಹರಿಕಥಾಮೃತಸಾರ ಪುಸ್ತಕವನ್ನು ಪ್ರಕಟಿಸಿ ಉಚಿತ ವಿತರಣೆ ಮಾಡಿದರು.

ಚಿತ್ರಗಳಲ್ಲಿ ಜಗನ್ನಾಥದಾಸರ ವೈಶಿಷ್ಟ್ಯವನ್ನು ವಿವರಿಸಿದ ಶ್ರೀ ಕೃಷ್ಣಾಚಾರ್ಯ ಇನಾಮದಾರರನ್ನೂ ಹರಿಕಥಾಮೃತಸಾರ ಪಾರಾಯಣದಲ್ಲಿ ತೊಡಗಿದ ಪಂಡಿತ ವೃಂದವನ್ನೂ ಕಾಣಬಹುದು.

## ಪುಸ್ತಕ ಪ್ರದರ್ಶನ ಮಾರಾಟ

ತಿ.ತಿ.ದೇವಸ್ಥಾನಗಳ ಧಾರ್ಮಿಕ ಕೃತಿಗಳನ್ನು ಜನಕ್ಕೆ ತಲುಪಿಸುವ ಹಾದಿಯಲ್ಲಿ ರಾಜ್ಯ ರಾಜಧಾನಿಗಳಲ್ಲಿ ಪ್ರದರ್ಶನ ಮಾರಾಟ ಮಾಡುವ ಯೋಜನೆಯ ಅಂಗವಾಗಿ ಹೈದರಾಬಾದು ಮದರಾಸುಗಳಲ್ಲಿ ಮಾರ್ಚ್ ತಿಂಗಳಲ್ಲಿ ಒಂದೊಂದು ವಾರ ಕಾಲ ಪುಸ್ತಕ ಪ್ರದರ್ಶನ ಮಾರಾಟಗಳು ನಡೆದವು.

ಹೈದರಾಬಾದಿನ ಹಿಮಾಯತ್ ನಗರದ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ 11-3-93 ರಿಂದ 17-3-93 ರವರೆಗೆ ನಡೆದ ಪುಸ್ತಕ ಪ್ರದರ್ಶನವನ್ನು

ಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಕೆ. ರಂಗಾರಾವ್ ಅವರು ಆರಂಭಿಸಿದರು. ಮತಿ ಎಂ. ಎಸ್. ರಮೇಶ್ ಬರೆದ ನೂರೆಂಟು ವೈಷ್ಣವ ದಿವ್ಯದೇಶಗಳು ಭಾಗ-1 ಹಾಗೂ ಭಗವ ತಾ--ಶಿಷ್ಟಾಸುಬ್ಬಾರಾವ್ ವ್ಯಾಖ್ಯಾನ --ಎರಡೂ ಂಗ್ಲ ಪುಸ್ತಕಗಳನ್ನು ಈ ಸಂದರ್ಭದಲ್ಲಿ ಬಿಡುಗಡೆ ಾಡಲಾಯಿತು.

ತಿ.ತಿ.ದೇ. ಪುಸ್ತಕಗಳಿಗೆ ಮುಖಬೆಲೆಯಲ್ಲಿ ೇಖಡಾ ಇಪ್ಪತ್ತೈದರಿಂದ ಶೇಖಡ ಐವತ್ತರ ರೆಗೆ ರಿಯಾಯಿತಿ ನೀಡಲಾಗಿದ್ದಿತು. ಜೊತೆಗೆ .ತಿ.ದೇ. ನಿರ್ಮಾಣದ ಧ್ವನಿಸುರುಳಿಗಳು, ಶ್ರೀ ಂಕಟೇಶ್ವರ ಬ್ರಹ್ಮೋತ್ಸವ, ಶ್ರೀ ವೆಂಕಟೇಶ್ವರ ್ಳಭವಂ ವಿಡಿಯೋ ಕ್ಯಾಸೆಟ್‌ಗಳೂ, ಶ್ರೀ ವೆಂಕಟೇ ್ವರ ಸ್ವಾಮಿ ಪದ್ಮಾವತೀ ಅಮ್ಮನವರ ವರ್ಣಚಿತ್ರ ಳು, ರಜತ, ಸ್ವರ್ಣಪದಕಗಳೂ, ಎಸ್. ವಿ. ಶಿಲ್ಪಕ ಾಶಾಲೆಯ ಶಿಲ್ಪಗಳು, ಪ್ರದರ್ಶನದಲ್ಲಿದ್ದು ಮಾರಾ ಗೊಂಡವು.

ಮದರಾಸಿನ ಟಿ. ನಗರದ ವೆಂಕಟನಾರಾಯಣ ೀದಿಯ ತಿ.ತಿ.ದೇ. ಸತ್ರದಲ್ಲಿ 26-3-93 ರಿಂದ -4-93 ರ ವರೆಗೆ ಇದೇ ರೀತಿಯ ಪ್ರದರ್ಶನ ಾರಾಟಗಳು ನಡೆದವು. ಶ್ರೀ ಶ್ರೀ ಸೀತಾನಗರಂ ಿನ್ನ ಜೀಯರ್ ಸ್ವಾಮಿಗಳು ಪುಸ್ತಕ ಪ್ರದರ್ಶನದ ರಂಭ ಉತ್ಸವವನ್ನು ನಡೆಸಿಕೊಟ್ಟರು. 5.5 ಲಕ್ಷ ೂ.ಗಳ ಮಾರಾಟದ ದಾಖಲೆ ಮದರಾಸಿನಲ್ಲಿ ಂಡುಬಂದಿತು.

ಜನ ವಿಶೇಷವಾಗಿ ಉತ್ಸಾಹದಿಂದ ಪ್ರದರ್ಶನ ದಲ್ಲಿ ಭಾಗವಹಿಸಿ ಪುಸ್ತಕ, ಚಿತ್ರ, ಶಿಲ್ಪ, ಪದಕಗಳನ್ನು ೊಳ್ಳುವುದು ಎರಡೂ ಕಡೆಗಳಲ್ಲೂ ಕಂಡುಬಂದ ಸಾಮಾನ್ಯ ಅಂಶವಾಗಿದ್ದಿತು. ಹೀಗೆ ವಿವಿಧೆಡೆಗ ಳಲ್ಲಿ ಪ್ರದರ್ಶನ, ಮಾರಾಟವ್ಯವಸ್ಥೆ ಆಗದೇಕೆಂದು .ತಿ.ದೇ. ವಿಶೇಷಪ್ರಾಧಿಕಾರದ ಅಧ್ಯಕ್ಷರೂ, ಆಂಧ್ರ ಪ್ರದೇಶದ ಮುಖ್ಯ ಕಾರ್ಯದರ್ಶಿಯವರೂ ಆದ ಶ್ರೀ ಎಂ. ಎಸ್. ರಾಜಾಜಿ ಐ.ಎ.ಎಸ್. ಅವರು ಯೋಚಿಸಿದ್ದರು.

## ಅನ್ನಮಾಚಾರ್ಯರ 490 ವರ್ಧಂತಿ

ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರ ದಲ್ಲಿ ದಿನಾಂಕ 19-3-93 ರಿಂದ 25-3-93 ರವ ರೆಗೆ ಅನ್ನಮಾಚಾರ್ಯರ 490 ನೇ ವರ್ಧಂತಿ ಉತ್ಸ ವಗಳು ತಿ.ತಿ.ದೇ. ಅನ್ನಮಾಚಾರ್ಯ ಪ್ರಾಜೆಕ್ಟ್‌ವತಿ ಯಿಂದ ನಡೆದು ಯಶಸ್ವಿಯಾದವು.

19-3-93 ರಂದು ಬೆಳಗ್ಗೆ ಅನ್ನಮಾಚಾರ್ಯ ಮೂರ್ತಿಯ ಉತ್ಸವ ಮೆರವಣಿಗೆಯ ನಂತರ ಅನ್ನ ಮಾಚಾರ್ಯ ಕಲಾಮಂದಿರದಲ್ಲಿ ಶ್ರೀ ಗೋವಿಂ ದರಾಜಸ್ವಾಮಿ ಉತ್ಸವ ಮೂರ್ತಿಗಳ ಆಸ್ಥಾನ. ಪ್ರಾಜೆಕ್ಟ್ ಕಲಾವಿದರಿಂದ 'ದಿನಮು ದ್ವಾದಶಿ ನೇಡು' (ಅನ್ನಮಾಚಾರ್ಯರನ್ನು ತೀರ್ಥದಿವಸ ಕ್ಕೆಂದು ಅವರ ಮಗ ಕವಿ ಆಹ್ವಾನಿಸಿದ ಹಾಡು) ಶ್ರೀ ಡಿ. ವಿ. ಸುರೇಶರಾವು ಅವರ ಗಾಯನದ ನಂತರ ಶ್ರೀಮತಿ ಜಯಂತಿ ಸಾವಿತ್ರಿಯವರ ಹರಿಕಥೆ "ಅನ್ನ ಮಾಚಾರ್ಯ" ನಡೆಯಿತು.

ಅಂದು ಸಂಜೆ ತಿ. ತಿ. ದೇವಸ್ಥಾನಗಳ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಅವರ ಅಧ್ಯಕ್ಷತೆಯಲ್ಲಿ ವರ್ಧಂತಿ ಉತ್ಸ ವದ ಉದ್ಘಾಟನೆ ಆಯಿತು. ಮುಖ್ಯ ಅತಿಥಿ ಯಾಗಿ ಆಗಮಿಸಿದ ಪೆಂಚಲಕೋನದ ವಿಜಯೇ ಶ್ವರೀ ಮಾತಾಜೀ ಅವರು ಅನ್ನಮಾಚಾರ್ಯರ ಭಕ್ತಿ, ಆದರ್ಶವಾದರೆ, ಸಮಾಜ ಜೀವನವೂ ಸುಖ ಮಯವಾಗುವುದೆಂದು ಅನುಗ್ರಹ ವಚನ ನೀಡಿ ದರು. ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಮೇಡ ಸಾನಿ ಮೋಹನ್ ಅವರು ಪ್ರಾಜೆಕ್ಟ್ ಕಾರ್ಯಕ್ರಮ ಗಳ ವರದಿ ವಿವರಗಳನ್ನು ನೀಡಿದರು. ಡಾ. ಕೆ. ವಾಣಿ ಅವರ ವಂದನಾರ್ಪಣೆಯ ನಂತರ ಶ್ರೀಮತಿ ಪದ್ಮಾಮೂರ್ತಿ ಅವರ ಸಂಗೀತ ಕಚೇರಿ ನಡೆಯಿತು.

ದಿನವೂ ಬೆಳಗ್ಗೆ ಉಪನ್ಯಾಸ ಸಂಗೀತ ಗೋಷ್ಠಿ ಗಳೂ ಸಂಜೆಗಳಲ್ಲಿ ಸಂಗೀತ ಕಚೇರಿಗಳೂ ನಡೆ ದವು. ಸರ್ವಶ್ರೀ ಶ್ರೀರಾಮುಲುರೆಡ್ಡಿ (ಅನ್ನಮಯ್ಯ ಕಾವ್ಯತತ್ತ್ವ) ಎಸ್. ಲಕ್ಷ್ಮಣಯ್ಯ (ಭಗವದ್ಗೀತೆ) ಪಿ. ಲಕ್ಷ್ಮಣರಾವು (ಪೋತನ, ದೂರ್ಜಟಿ, ಅನ್ನ ಮಯ್ಯ) ಜೆ. ಬಾಲಸುಬ್ರಹ್ಮಣ್ಯಂ--(ಅನ್ನಮಯ್ಯ ಕೃಷ್ಣ) ಟಿ. ಆಂಜನೇಯುಲು-- ಷೋಡಶೋಪ ಚಾರ, ಎ. ಗೋಪೀನಾಥ್ ಅನ್ನಮಯ್ಯ ಪೋತನ, ತ್ಯಾಗಯ್ಯ) ಜಿ. ಗುಣಶೇಖರ್ -- ಆಧ್ಯಾತ್ಮತತ್ತ್ವ, ಎಂ. ಪ್ರಭಾಕರರಾವ್ (ಶಾಸ್ತ್ರೀಯತೆ) ಎಸ್. ಜಯಪ್ರ ಕಾಶ ಅವರು ಅನ್ನಮಯ್ಯನ ಭಾಷೆಯನ್ನು ಕುರಿತು ಮಾತನಾಡಿದರು. ಶ್ರೀಮತಿ ಮಲಯವಾಸಿನಿ ಅನ್ನ ಮಯ್ಯನ ಪದಗಳ ಭಾವಸೌಂದರ್ಯದ ಬಗ್ಗೆ ನುಡಿ ದರು. ಶ್ರೀಮತಿ ಜೆ. ಕೃಷ್ಣಕುಮಾರಿ ಶ್ರೀ ವೆಂಕಟೇಶ್ವ ರೋದ್ಭವ ಹರಿಕಥೆ ಮಾಡಿದರು.

ಸರ್ವಶ್ರೀ ಪಿ. ಎಸ್. ರಂಗನಾಥ್, ಜಿ. ನಾಗೇಶ್ವರ ರಾವುನಾಯುಡು, ಆನಂದಭಟ್ಟರ್, ಜಿ. ಬಾಲಕೃಷ್ಣ ಪ್ರಸಾದ್, ಎಸ್. ಆರ್. ಜಾನಕೀರಾಮನ್, ಡಿ. ಪಶುಪತಿ, ನೂಕಲ ಚಿನ ಸತ್ಯನಾರಾಯಣ ಮೊದ ಲಾದವರುಗಳು ಅನ್ನಮಾಚಾರ್ಯರ ಸಂಕೀರ್ತನೆಗ ಳನ್ನು ಹಾಡಿ ತಣಿಸಿದರು. ಶ್ರೀಮತಿ ಸರಸ್ವತೀ ವಾಸು ದೇವನ್ ವೀಣೆ ಹಾಗೂ ಶ್ರೀ ಪಿ. ಪಿ. ಸೋಮಯಾ ಜುಲು ವಯೋಲಿನ್ ವಾದನದಲ್ಲಿ ಈ ಕೀರ್ತನೆಗಳ ಸ್ವಾರಸ್ಯವನ್ನು ವಿವರಿಸಿದರು.

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಜೂನ್ 1993

**ವೇಮನ ಪದ್ಯಗಳು** — --ಎನ್. ಶಿವಗೌಡ

**ತಾತಾಚಾರ್ಯ** — --ಸಿ. ಗೋವಿಂದಾಚಾರ್

**ದಾಸಭಾವ** — --ಕೆ. ವಿ. ಶ್ರೀನಾಥ್

**ಪಂಡರಿನಾಥ** — --ಆರ್. ಜಿ. ಶಾನಭಾಗ

**ಭೀಮನ ಸಂತೋಷ**

--ಸಂತ ಪರಿಪರಾನಂದ ಸರಸ್ವತೀ

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**

**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಇಪ್ಪತ್ತಾಲ್ಕು ರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ.ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.

# ತಿಂಗಳಿನ ಮುಖ್ಯದಿನಗಳು

## ಜೂನ್ --- 1993

| | |
|---|---|
| 1. ಮಂಗಳವಾರ | ನಾರಾಯಣವನ, ಹೃಷೀಕೇಶ, ಅಪ್ಪಲಾಯಗುಂಟಗಳಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಧ್ವಜಾರೋಹಣ. |
| 2. ಬುಧವಾರ | ತಿರುಮಲ ನಂಬಿ ತಿರುನಕ್ಷತ್ರ. |
| 3. ಗುರುವಾರ | ಮುಳಬಾಗಿಲನಲ್ಲಿ ಶ್ರೀಪಾದರಾಜರ ಆರಾಧನೆ. ಶ್ರೀ ನಮ್ಮಾಳ್ವಾರ್ ಶಾತ್ತುಮೊರೆ. ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ ರಥೋತ್ಸವ. ತಿರುಮಲೆಯಲ್ಲಿ ಜ್ಯೇಷ್ಠಾಭಿಷೇಕೋತ್ಸವಾರಂಭ. |
| 4. ಶುಕ್ರವಾರ | ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ ಅವಭೃಥ. ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಪ್ಲವೋತ್ಸವ ಸಮಾಪ್ತಿ. ಚಂದ್ರಗ್ರಹಣ. |
| 5. ಶನಿವಾರ | ತಿರುಮಲೆಯಲ್ಲಿ ಜ್ಯೇಷ್ಠಾಭಿಷೇಕ ಸಮಾಪ್ತಿ. |
| 20. ಭಾನುವಾರ | ಶ್ರೀ ಪೆರಿಯಾಳ್ವಾರ್ ಉತ್ಸವಾರಂಭ. |
| 26. ಶನಿವಾರ | ಶ್ರೀನಿವಾಸ ಮಂಗಾಪುರದಲ್ಲಿ ಸಾಕ್ಷಾತ್ಕಾರ ವೈಭವ. |
| 27. ಭಾನುವಾರ | ಶ್ರೀ ವಿಖಾನಸಾಚಾರ್ಯ ಉತ್ಸವಾರಂಭ. |
| 29. ಮಂಗಳವಾರ | ಶ್ರೀ ಪೆರಿಯಾಳ್ವಾರ್ ಶಾತ್ತುಮೊರೆ. |
| 30. ಬುಧವಾರ | ತಿರುಪತಿ ಶ್ರೀ ಗೋವಿಂದರಾಜಸ್ವಾಮಿ ಜ್ಯೇಷ್ಠಾಭಿಷೇಕಾರಂಭ. |



ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಪೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.
2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.
3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.
4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.
5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.
6. ಆಲಯಸಮುದಾಯ --ಹೃಷೀಕೇಶ.

**ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.**

**ತಿ. ತಿ. ದೇವಸ್ಥಾನಗಳು,**

ತಿರುಪತಿ.



Edited and published on behalf of T.T. Devasthanams by K. Subba Rao, M.A., and Printed at T.T.D. Press by M. Vijayakumar Reddy, Manager, T.T.D. Press, Tirupati - 517 507

